ಜೀವನ ಸಾಹಿತ್ಯ ೧

# ಹುಚ್ಚ ಮುನಸೀಫ

ಮತ್ತು

# ಇತರ ಕತೆಗಳು

ಬಾಗಲೋಡಿ ದೇವರಾಯ

ಜೀವನ ಕಾರ್ಯಾಲಯ
ಬಸವನಗುಡಿ
ಬೆಂಗಳೂರು ೪

# ಮುನ್ನುಡಿ

ಎರಡು ವರ್ಷದ ಹಿಂದೆ ನಾನು ಮದರಾಸಿಗೆ ಹೋಗಿದ್ದ ವೇಳೆ ಅಲ್ಲಿಯ ಕ್ರಿಶ್ಚಿಯನ್ ಕಾಲೇಜಿನ ಕರ್ಣಾಟಕ ಸಂಘದಲ್ಲಿ ಒಂದು ಭಾಷಣ ಮಾಡ ಬೇಕಾದ ಸಂದರ್ಭದಲ್ಲಿ ಆಗ ಆ ಕಾಲೇಜಿನಲ್ಲಿ ಆಂಗ್ಲ ಅಧ್ಯಾಪಕರಾಗಿದ್ದ ಶ್ರೀ ಬಾಗಲೋಡಿ ದೇವರಾಯರ ಪರಿಚಯ ಲಾಭವನ್ನು ಪಡೆದೆನು. ಶ್ರೀಯುತರು ಕನ್ನಡ ಲೇಖಕರೆಂದು ಮಿತ್ರರಿಂದ ತಿಳಿದು ಇವರಿಂದ "ಜೀವನ" ಪತ್ರಿಕೆಗೆ ಲೇಖನಗಳನ್ನು ಬೇಡಿ ಬಂದೆನು. ಇಂಥ ಬೇಡಿಕೆ ನೂರು ಕಿವಿಗೆ ಬಿದ್ದರೆ ಒಂದು ಮನಸ್ಸನ್ನು ಮುಟ್ಟುತ್ತದೆ. ಬಾಗಲೋಡಿಯವರು ನನ್ನ ಬೇಡಿಕೆಯನ್ನು ಮನಸ್ಸಿಗೆ ತಂದುಕೊಂಡರು; ಸ್ವಲ್ಪ ಕಾಲದಲ್ಲೇ ಒಂದು ಕತೆಯನ್ನು ಕಳುಹಿಸಿದರು. ಅದರ ಹೆಸರು "ಶುದ್ಧ ಘಟಿಂಗ." ಅದು ಈ ಸಂಕಲನದಲ್ಲಿದೆ. ನನಗೆ ಅದು ಬಹು ಒಪ್ಪಿಗೆ ಆಯಿತು; ಅದನ್ನು "ಜೀವನ" ದಲ್ಲಿ ಪ್ರಕಟಿಸಿದೆನು. ಅದು ಮೊದಲು ಈ ಮಿತ್ರರು ಆ ಪತ್ರಿಕೆಯಲ್ಲಿ ಪ್ರಕಟ ವಾಗಲು ಹಲವು ಕತೆಗಳನ್ನು ಕಳುಹಿಸಿದಾರೆ. ಹಲವು ಈಗಾಗಲೇ ಪ್ರಕಟ ವಾಗಿವೆ. ಉಳಿದವು ಮುಂದೆ ಪ್ರಕಟವಾಗಲಿವೆ. ಹೀಗೆ ಮೊದಲಾಗಿ ಬೆಳೆದು ಬಂದಿರುವ ನಮ್ಮ ಬಾಂಧವ್ಯ ಈಗ ನನಗೆ ಈ ಕಥಾ ಸಂಕಲನದ ಪ್ರಕಾಶಕ ನಾಗುವ ಗೌರವವನ್ನು ತಂದುಕೊಟ್ಟಿದೆ.

ಇದು ಬಹು ನಿಜವಾದ ಒಂದು ಗೌರವ ಎಂಬುದನ್ನು ಈ ಕತೆಗಳನ್ನು ಓದುವವರು ಮನಗಾಣುವರೆಂದು ನನ್ನ ನಂಬಿಕೆ. ಸಣ್ಣ ಕತೆಗಳು ತಕ್ಕಷ್ಟು ಸಂಖ್ಯೆಯಲ್ಲಿ ಬರುತ್ತಿರುವ ಈ ದಿನದಲ್ಲಿ ಶ್ರೀ ಬಾಗಲೋಡಿಯವರ ಕತೆಗಳು ಅವರದೇ ಆದ ಒಂದು ವಸ್ತುವೈಶಿಷ್ಟ್ಯ, ಕಥನಪದ್ಧತಿ, ಉಚಿತ ಶೈಲಿ, ರಸ ಸಿದ್ಧಿಗಳಿಂದ ನಿರಾಯಾಸವಾಗಿ ಒಂದು ಮೇಲ್ಮಟ್ಟವನ್ನು ಮುಟ್ಟುತ್ತವೆ. ಇದರ ಕಾರಣ ನನಗೆ ಕಾಣುವ ಮಟ್ಟಿಗೆ ಲೇಖಕರು ತಮ್ಮ ಹುಟ್ಟುನಾಡಿನ ಜೀವನವನ್ನು ಒಲಿದ ಕಣ್ಣಿಂದ ನೋಡಿ ಬಗೆಯರಳಿ ಗ್ರಹಿಸಿರುವುದು. ಆ ಒಲುಮೆಯ ಫಲವಾಗಿ ಇವರಿಗೆ ಆ ನಾಡ ನಡೆನುಡಿಯ ಸೊಗಸಿನ ಗುಟ್ಟು ತಾನಾಗಿ ಕೈಸೇರಿದೆ. ಇಲ್ಲಿಯ ವ್ಯಕ್ತಿಗಳು ಮಂಗಳೂರಿನ ಸುತ್ತಿನ ಕನ್ನಡ

ಭೂಮಿಯಲ್ಲಿ ಎಲ್ಲಿಯಾದರೂ ಕಣ್ಣಿಗೆ ಕಾಣಬಹುದಾದಂಥವರು; ಇಲ್ಲಿಯ ಸನ್ನಿವೇಶಗಳು ನೇರವಾಗಿ ಅಲ್ಲಿಯ ಜೀವನದಿಂದ ಮೂಡಿರುವವು; ಇಲ್ಲಿಯ ಮಾತು, ಇಲ್ಲಿಯ ಹಾಸ ಅಲ್ಲಿಯ ಯಾವುವೇ ಊರಿನಲ್ಲಿ, ಬೀದಿಯಲ್ಲಿ ಕೇಳ ನೋಡಬರುವಂಥವು. ಜೀವನಕ್ಕೆ ಹತ್ತಿರವಾದಷ್ಟೂ ಸಾಹಿತ್ಯಕ್ಕೆ ಕಳೆ ಕೂಡುತ್ತದೆ ಎನ್ನುವುದು ಸರ್ವಸಮ್ಮತವಾದ ಒಂದು ಸೂತ್ರ. ಈ ಸಂಕಲನದ ಕತೆಗಳು ಈ ಸೂತ್ರಕ್ಕೆ ಒಂದು ನಿದರ್ಶನವಾಗುವಂತೆ ಒಂದು ಕನ್ನಡ ಪ್ರಾಂತದ ಬಾಳುವೆಯಲ್ಲಿ ಬೇರೂರಿ ನಿಂತಿವೆ.

ಪ್ರಾಂತಜೀವನದ ಚಿತ್ರವೆಂದ ಮಾತ್ರಕ್ಕೆ ಇವು ವಿಶ್ವಜೀವನದ ಚಿತ್ರವಾಗಲಿಲ್ಲವೆಂದಲ್ಲ. ತಾನು ಚಿತ್ರಿಸುವ ತನ್ನ ಪ್ರಾಂತದ್ದೆನ್ನುವ ಜೀವನದ ಹೊರಮುಖವನ್ನು ಮಾತ್ರ ಅರಿತ, ಗುರುತಿಸಿದ, ಲೇಖಕನು ವಿಶ್ವಜೀವನವನ್ನು ನೋಕದೆ ನಿಲ್ಲಬಹುದು. ಬಾಗಲೋಡಿಯವರು ತಾವು ಕಂಡ ಜೀವನದ ಒಳಗನ್ನು ನೋಡಿದಾರೆ, ಗ್ರಹಿಸಿದಾರೆ. ಆದ್ದರಿಂದ ಪ್ರಾಂತ ಜೀವನದ ಈ ಚಿತ್ರಗಳು ವಿಶ್ವಜೀವನದ ಚಿತ್ರಗಳೂ ಆಗಿವೆ. ಒಂದು ಉದಾಹರಣೆಯನ್ನು ಹೇಳುವುದಾದರೆ "ಅವರವರ ಸುಖದುಃಖ" ಕತೆಯನ್ನು ನೋಡುವುದು ನಾಕು. ಈ ತಂದೆ, ತಾಯಿ, ಮಗ, ಅಳಿಯ, ಮಂಗಳೂರವರೂ ಹೌದು, ಬೆಂಗಳೂರವರೂ ಹೌದು; ಬಾಗ್ದಾದ್, ಎಡಿನ್‌ಬರೊ, ಬೋಸ್ಟನ್‌ನವರೂ ಹೌದು.

ಹೊರಗಿನ ಒಂದು ಕತೆಯ ಆಧಾರದ ಮೇಲೆ ಬರೆದಿರುವ ಕತೆ ಕೂಡ ಬಾಗಲೋಡಿಯವರ ಶಕ್ತಿಯನ್ನು ತೋರುತ್ತದೆ. ವೀರಬೀಡಿನ ಅರಮನೆಯ ಬಾಡಲು ಹೂವಿನ ಕಂಪು ಹೊರ ಯಾವುದೊ ದೇಶದ್ದಲ್ಲ; ಮಂಗಳೂರಿನ ಸುತ್ತಿನದು. ಹೊರಗಿಂದ ಬಂದು ಅರಸರನ್ನು ಅಪಹಾಸ್ಯ ಮಾಡುವ ಜನ ಬಹುತೇಕ ನಮ್ಮ ದೇಶದವರಲ್ಲ ಎನ್ನಿಸುತ್ತದೆ. ಅರಸು ಜೀವ ಬಿಡುವ ರೀತಿಯೂ ಪರದೇಶದ್ದೇನೊ. ಇದು ಹೇಗೇ ಆದರೂ ಅವನೇನೊ ದಕ್ಷಿಣ ಕನ್ನಡದ ಮಣ್ಣಿಂದ ಆದ ಗಂಭೀರ ಭದ್ರಮೂರ್ತಿ. ಹೊರಗಿನ ವಸ್ತುವನ್ನು ಅನುಸರಿಸಿ ಬರೆಯುವಲ್ಲೂ ಇಂಥ ಜೀವಂತ ಮೂರ್ತಿಯನ್ನು ನಿರ್ಮಿಸಿಕೊಳ್ಳಬಲ್ಲ ಊಹೆ ಉನ್ನತ ರೀತಿಯದು, ಅಪೂರ್ವವಾದದ್ದು.

ಈ ಸಂಕಲನದ ಪ್ರಕಟನೆಯನ್ನು ಕೈಕೊಂಡ ಈಚೆಗೆ ಶ್ರೀ ಬಾಗಲೋಡಿ ಯವರಿಗೆ ನಮ್ಮ ಕೇಂದ್ರ ಸರಕಾರದ administrative service ನಲ್ಲಿ ಒಂದು ಸ್ಥಾನ ದೊರಕಿದೆ. ಇದು ಕನ್ನಡ ಜನಕ್ಕೇ ಸಂತೋಷ ತರಬೇಕಾದ ಸಂಗತಿ. ತನ್ನ ಜನಜೀವನವನ್ನು ಸ್ನಿಗ್ಧ ಭಾವದಿಂದ ನೋಡಬಲ್ಲ ಈ ನಮ್ಮ ಮಿತ್ರರು ಇಂಥ ಸೇವಾ ಕ್ಷೇತ್ರಕ್ಕೆ ಸರ್ವಥಾ ಅರ್ಹರು. ಇವರು ತಮ್ಮ ಅಧಿಕಾರ ಭೂಮಿಯಲ್ಲಿ ಯಶಸ್ವಿಗಳಾಗುವರೆಂದು ನಾವು ನಿರೀಕ್ಷಿಸಬಹುದು. ಅದೇ ವೇಳೆಯಲ್ಲಿ ಇವರ ಪ್ರೇಕ್ಷಣದ ಜೀವನರಂಗ ವಿಸ್ತಾರವಾಗಿ ಇವರ ಸಾಹಿತ್ಯ ಸೇವೆಯೂ ವಿಸ್ತಾರವಾಗಲೆಂದು ನಾನು ಬಯಸುತ್ತೇನೆ.

ಗವಿಪುರದ ವಿಸ್ತರಣ, ಬೆಂಗಳೂರು.
ವಿರೋಧಿ ಸಂ. ಭಾದ್ರಪದ ಶುದ್ಧ ದಶಮಿ
೧-೧೦-೧೯೪೯

**ಶ್ರೀನಿವಾಸ**

## ಅರಿಕೆ

ಈ ಕತೆಗಳ ಸಂಕಲನ ರೂಪುಗೊಳ್ಳಲು ಕಾರಣರಾದ ಪೂಜ್ಯ ಮಾಸ್ತಿ ಯವರಿಗೆ ಕೃತಜ್ಞನಾಗಿದ್ದೇನೆ.

**ಬಾಗಲೋಡಿ ದೇವರಾಯ**

# ವಿಷಯ ಸೂಚಿ

# ಹುಚ್ಚ ಮುನಸೀಫರ ಚರಿತ್ರೆ

ಮೂವತ್ತು ವರುಷಗಳ ಕೆಳಗೆ ಸುಂದರಪ್ಪ ಎಂಬುವರು ಪುತ್ತೂರು ತಾಲ್ಲೋಕಿಗೆ ಮುನಸೀಫರಾಗಿದ್ದರು. ನಿಮ್ಮ ಅಜ್ಜಂದಿರೋ, ಮಾವಂದಿರೋ ಇದ್ದರೆ ವಿಚಾರಿಸಿ ಕೇಳಿ; ಆದರೆ ಮುನಸೀಫ ಸುಂದರಪ್ಪನವರು ಎಂದರೆ ಅವರಿಗೆ ತಿಳಿಯಲಿಕ್ಕಿಲ್ಲ. "ಹುಚ್ಚ ಮುನಸೀಫ" ಅಂದರೆ "ಓಹೋ! ಆ ಮಹಾನುಭಾವನೋ!" ಎಂದು ಹೇಳಿ ನಸುನಕ್ಕಾರು.

ಈ ಮನುಷ್ಯನ ವರ್ತನೆ ಎಲ್ಲಾ ತುಸು ಅದ್ಭುತ. ಅದಕ್ಕೇನೇ ಊರಿಗೆಲ್ಲಾ ಹುಚ್ಚ ಮುನಸೀಫನೆಂದು ಪ್ರಸಿದ್ಧನಾದುದು. ಆದರೆ ಎಷ್ಟೋ ಮಂದಿ, ಆತನನ್ನೇ "ಅವಧೂತವ್ಯಕ್ತಿ," "ವಿಚಿತ್ರಾವತಾರಿ" ಎಂದು ಕರೆಯುತ್ತಿದ್ದುದೂ ಉಂಟು. ಆ ಮಹಾರಾಯನ ಆಳ ಯಾರಿಗೂ ಗೊತ್ತಾಗುತ್ತಿರಲಿಲ್ಲ.

ಕೋರ್ಟಿನಲ್ಲಿ ಆತ ಯಾವ ಹೊತ್ತಿಗೆ ಹೇಗೆ ಇರುತ್ತಾನೆಂದು ಪಳಗಿದ, ಕುತಂತ್ರದಲ್ಲೇ ತಲೆಹಣ್ಣಾದ, ದೇವೇಂದ್ರನಂತೆ ಮೈಯೆಲ್ಲಾ ಕಣ್ಣಾದ, ನರಿ-ವಕೀಲರಿಗೂ ಹೇಳಲಾಗುತ್ತಿರಲಿಲ್ಲ. ಜಡ್ಜಿ-ಮುನಸೀಫುಗಳ ಮನಸ್ಸನ್ನು ಅಂಜನ ಹಾಕಿದಂತೆ ಓದಬಲ್ಲ ಕರಟಕ-ದಮನಕ ವಕೀಲರೂ "ಈ ಧರ್ಮಾವತಾರರ ಮರ್ಜಿ ತಿಳಿಯೋಲ್ಲಪ್ಪ!" ಎಂದು ಹೇಳಿ ತಲೆಕೆರೆದುಕೊಳ್ಳುತ್ತಿದ್ದರು. ಸಾಕ್ಷಿಗಳು, ವಾದಿ-ಪ್ರತಿವಾದಿಗಳು ಈತನ ಮುಂದೆ ಹೇಳಿಕೊಟ್ಟ ಬುದ್ಧಿ ಎಲ್ಲಾ ಮರೆತು ತಬ್ಬಿಬ್ಬಾಗಿ ಬಿಟ್ಟು, ಬಾಯ್ಬಿಟ್ಟಿದ್ದ ಎಷ್ಟೋ ಪ್ರಸಂಗಗಳಿದ್ದುವು. ಹಾಗೆಂದು, ಈ ಮುನಸೀಫ, ಗುಡುಗುವುದಾಗಲೀ, ಗರ್ಜಿಸುವುದಾಗಲೀ, ಡೊಂಕು ಪ್ರಶ್ನೆ ಕೇಳುವುದಾಗಲೀ, ಒಂದನ್ನೂ ಮಾಡುತ್ತಿರಲಿಲ್ಲ. ಆತನ ದೃಷ್ಟಿ, ನೋಟ, ಮಾತ್ರ ಒಂದು ವಿಧವಾಗಿ ಇದ್ದುವು. ಕಣ್ಣು ತೆರೆದೇ ಇದ್ದರೂ ಕಣ್ಣು ಮುಚ್ಚಿಯೇ ಇದ್ದಂತೆ, ಎಚ್ಚರವಿದ್ದರೂ ನಿದ್ರಿಸುತ್ತಾ ಇದ್ದಂತೆ, ತನ್ನ ದೊಡ್ಡ ದೊಡ್ಡ ಬೊಗಸೆಗಣ್ಣುಗಳನ್ನು ಅಗಲವಾಗಿ ಹಣೆಯೆಲ್ಲಾ ತುಂಬಿ ಹೋಗುವಂತೆ ತೆರೆದು ಸಾಕ್ಷಿಗಳು, ಸಾಕ್ಷಿ

ಪೆಟ್ಟಿಗೆ, ಕೋರ್ಟು, ಪೇಪೆ, ವಕೀಲರು ಇವರನ್ನೆಲ್ಲಾ ದಾಟಿ, ನುಂಗಿ, ಆವರಿಸಿ, ನೋಡುತ್ತಿದ್ದ.

ನಿತ್ಯವೂ ಆತ ಅತಿ ಸೌಮ್ಯಮನುಷ್ಯ. ಎಂಥಾ ಕಿರುಕುಳದ ಲಾಯರಿರ್ಸೇ ಆಗಲಿ, ಎಂಥಾ ಮೊಂಡ, "ಅಲ್ಲ, ಇಲ್ಲ, ಗೊತ್ತಿಲ್ಲ" ಎಂದು ಮಂತ್ರ ಜಪಿಸುವ ಅಥವಾ ಸುಳ್ಳು ಬೊಂಕುವ ಅಪರಾಧಿಯೇ ಆಗಲಿ, ಇರಲಿ, ಈತ ಕಣ್ಣು ತೆರೆದೇ ಮಲಗಿದವನಂತೆ, ಸ್ಥಿರವಾಗಿ, "ತಟ್ಟೇರಾಯ" ನಂತೆ, ಸಮಾಧಿಸ್ಥನಂತೆ, ಕೂರುತ್ತಿದ್ದ. ಆದರೆ ಒಮ್ಮೊಮ್ಮೆ—ಯಾವ ಗ್ರಹಣ ಕಾಲವೋ, ರಾಹುಕೇತು ಸಂಧಿಕಾಲವೋ ಏನೋ—ವೀರಭದ್ರನ ಅವತಾರ ತಾಳಿ, ಸಿಡಿದು ಗುಡುಗಿ, ವಕೀಲರನ್ನು ತಲೆಕೆಳಗುಮಾಡಿ, ಸಾಕ್ಷಿಗಳನ್ನು ಅತ್ತು ದಮ್ಮಯ್ಯ ಅನ್ನುವ ಹಾಗೆ ಮಾಡಿ, ಮುದ್ದಾಯಿ-ಮುದ್ದಾಯಿ-ಅಲೆಯರನ್ನು ಮೂರ್ಛೆತಪ್ಪುವ ಹಾಗೆ ಮಾಡುತ್ತಿದ್ದ. ಜ್ಯೂರಿ, ಅಸೆಸರುಗಳು ಕೂತಲ್ಲಿಯೇ ನಡುಗುತ್ತಿದ್ದರು. ಈ ರೌದ್ರಾವತಾರ, ಮತ್ತು ಸಾಕ್ಷ್ಯದ ಪರದೆ ಎತ್ತಿ, ಒಳಗಿನ ವೇಷ ಕಾಣುವ ದೃಷ್ಟಿಯಿಂದ ಕೋರ್ಟಿಗೆ ಕೋರ್ಟೇ ಈತನಿಗೆ ಹೆದರುತ್ತಿತ್ತು.

ಆದರೆ, ಈ "ನಿತ್ಯ ಶಾಂತಾರಾಮ ಅಮಾವಾಸ್ಯೆಗೊಮ್ಮೆ ಉಗ್ರನಾರಸಿಂಹ" ಅವತಾರದಿಂದಲಾಗಲೀ, "ನೋಟೀಸ್" ಕೊಡದೇನೇ, ಸಿಡಿಲಮರಿ ರೂಪ ತಾಳುವುದರಿಂದಾಗಲೀ, ಲಂಚ, ರಕ್ಕು, ಮರೆಮೋಸ ಅಂದರೆ ಮೈ ಉರಿಯುವುದರಿಂದಾಗಲೀ, ಈತನಿಗೆ "ಹುಚ್ಚ ಮುನಸೀಫ" ಎಂಬ ಬಿರುದು ದಕ್ಕಿದ್ದಲ್ಲ. ಅದೊಂದು ಪುರಾಣವೇ ಬೇರೆ. ಒಂದು ಬಾರಿ ಒಂದು ದೊಡ್ಡ ಸ್ಥಿತಿವಂತರ ಮನೆ ನಾಲಾಯಿತು. ಅರಮನೆ ದಂಡೀರಾಯರು ಸತ್ತು, ಅವರ ಮಕ್ಕಳಲ್ಲಿ ಆ ದೊಡ್ಡ ಆಸ್ತಿ, ಸಂಪತ್ತು ಪಾಲಾಗಬೇಕಾಯಿತು. ಅಣ್ಣತಮ್ಮಂದಿರೊಳಗೆ ಎಣ್ಣೆ ಸೀಗೆಯಂಥಾ ಪ್ರಗಾಢವಾದ ಮೈತ್ರಿಯಿದ್ದುದರಿಂದಲೂ, ಈ ಸಹೋದರ ಮಾರ್ಜಾಲಗಳ ಕಾದಾಟದಲ್ಲಿ, ಬೆಣ್ಣೇ ನುಂಗಿ ಹಾಕುವ ಸದುದ್ದೇಶ ಹಾಗೂ ಪವಿತ್ರ ವಿಚಾರದಿಂದ, ಮಾವ, ಭಾವ, ನಂಟ, ಇಷ್ಟ, ಎಂಬ ಇತ್ಯಾದಿ ಮಂಗಗಳು ಬಂದು ಮಧ್ಯಸ್ತಿಕೆಗೆ ಕೈಹಾಕಿದುದರಿಂದಲೂ, ವಿಭಜನೆ, ಪಂಚಾಯತಿಕೆಯಲ್ಲಿ, ಶಾಂತಿಯಲ್ಲಿ, ನಡೆಯುವುದು ಅಸಾಧ್ಯವಾಯಿತು. ಸಭ್ಯಜನರ ಕಾಳಗದ ಕಳವಾದ ಕೋರ್ಟು ಇದೆ

ತಾನೆ? ಮತ್ತೇನು? ಕೋರ್ಟಿನ ಮೂಲಕ ಬೇರೇ ಚರ-ಅಚರ ಆಸ್ತಿಗಳ ವಿಭಜನೆ ಕಾಯಿದೇಶೀರ ಆದರೂ, ಮನೆಯಲ್ಲಿದ್ದ ಎಳೆಂಟು ಆಕಳುಗಳ ಪಾಲು ಒಂದು ಬ್ರಹ್ಮಗಂಟಾಗಿ ಉಳಿಯಿತು. ಆ ದನಗಳು ಕಾಮಧೇನುವಿನಂಥಾ ದನಗಳು. ಗೋವೆಯವೋ, ನೆಲ್ಲೂರಿನವೋ ಇದ್ದಿರಬೇಕು. ಶಂಖದಂಥ ಕಿವಿ, ಆನೆಯ ಮೈಕಟ್ಟು, ದೊಡ್ಡ ದೊಡ್ಡ ಕೆಚ್ಚಲುಗಳಲ್ಲಿ ಖಂಡುಗ ಖಂಡುಗ ಹಾಲು. ಆ ಆಕಳುಗಳ ವಿಭಜನೆಯನ್ನು ನಮ್ಮ ಮುನಸೀಫರು ಬಹಳ ವಿಚಿತ್ರವಾದ ರೀತಿಯಲ್ಲಿ ಮಾಡಿದರು. ಎರಡೂ ಕಡೆಯ ಸಾಕ್ಷ್ಯ—ಪ್ರತಿಸಾಕ್ಷ್ಯ, ಹೇಳಿಕೆ—ಕೇಳಿಕೆಗಳನ್ನೆಲ್ಲಾ ಕೇಳಿದಂತೆ ಕೇಳಿ,—ನೀವು ನಂಬಲಾರಿರಿ—ಆ ಆಕಳುಗಳಿಗೇ "ಸಮನ·" ಕಳಿಸಿ ತರಿಸಿದರು. ಆಕಳುಗಳನ್ನು "ಹುಕುಂ" ಪ್ರಕಾರ ಕೋರ್ಟಿನಲ್ಲಿ "ಹಾಜರ್" ಮಾಡಲಾಯಿತು. ಕೋರ್ಟಿಗೆ ಕೋರ್ಟೇ, ದಂಗು ಬಡಿದು ಮೂಗಿಗೆ ಬೆರಳಿಟ್ಟು ನೋಡುತ್ತಿದ್ದ ಹಾಗೆಯೇ, ಈ ಅದ್ಭುತವ್ಯಕ್ತಿ ದನಗಳಿದ್ದಲ್ಲಿಗೆ ಹೋಗಿ, ಮೈಸವರಿ, ಮೋರೆಗೆ ಮೋರೆ ತಾಕಿಸಿ, ಏನೇನೋ ಮಾಡಿದ· ಆಮೇಲೆ ವಕೀಲರ ವಾಗ್ವಾದ, ಸಾಕ್ಷ್ಯದ ರಾಶಿಗಟ್ಟಿದ ಮಹಾಪರ್ವತ, ಇವನ್ನೆಲ್ಲಾ ಕಡೆಗಣಿಸಿ, ಆ ಆಕಳುಗಳನ್ನೆಲ್ಲಾ ಈ *"ಕೇಸಿ"ಗೇ ಸಂಬಂಧಪಡದ ಒಬ್ಬಳು ತಂಗಿಗೇ (ಮೃತನ ಮಗಳು) ಸಲ್ಲಬೇಕೆಂದು ಹುಕುಂ ಜಾರಿಮಾಡಿ ತೀರ್ಪುಕೊಟ್ಟನು. ಆ ತೀರ್ಪಿನಲ್ಲಿ "ವಾದಿ, ಪ್ರತಿವಾದಿ, ಇತ್ಯಾದಿ ಮೃತನ ಹಕ್ಕುದಾರರ ಹಿತವನ್ನು ಆಸ್ತಿ-ವಿಭಜನೆಯಲ್ಲಿ, ಈ ಕೋರ್ಟು ನಾಕಷ್ಟು, ಧಾರಾಳವಾಗಿ ಸಂರಕ್ಷಿಸಿದೆ. ಈ ಆಕಳುಗಳ ಹಿತಸಂರಕ್ಷಣೆಗಾಗಿ ಈಗ ಈ ತೀರ್ಪನ್ನು ಕೊಡಬೇಕಾಗಿದೆ" ಎಂದು ಅಪ್ಪಣೆ ಕೊಡಿಸಿದನು.

ಈ ವಿಚಿತ್ರ ತೀರ್ಪನ್ನು ಮೇಲಿನ ಕೋರ್ಟಿನವರು ಸಹಜವಾಗಿಯೇ ತಳ್ಳಿಹಾಕಿದರು. ಎಲ್ಲಾದರೂ ಉಂಟೇ? ಈ ದನಾ-ಕರುಗಳ, ಪಶು-ಜಾನುವಾರಗಳ ಹಿತರಕ್ಷಣೆಗಾಗಿಯೇನು ಘನ ಸರಕಾರ ಕೋರ್ಟು ಕಛೇರಿ ಕಟ್ಟಿಸಿ ಜಡ್ಜಿಗಳಿಗೆ ಸಂಬಳ ತೆರುತ್ತಿರುವುದು?

ಇಂಥಾ ಅದ್ಭುತ ತೀರ್ಪುಗಳಿಂದ ಈ ಮನುಷ್ಯನಿಗೆ ಜಡ್ಜಿ ಆಗುವ

* ಕೇಸು=ದಾವೆ; ಪ್ರಕರಣ.

ಭಾಗ್ಯವೂ ತಪ್ಪಿಹೋಯಿತು. ಆತನಿಗೆ ಹುಚ್ಚ ಮುನಸೀಫನೆನ್ನಸಿಕೊಂಡೇ ಸಾಯಬೇಕೆಂದು ಹಣೆಯಲ್ಲಿ ಬರದಿದ್ದರೆ ಏನು ಮಾಡಲಿಕ್ಕಾಗುತ್ತದೆ? ಒಂದು ಬಾರಿ ತಾನು ಹಂಗಾಮಿ ಜಡ್ಜಿ ಆದಕಾಲಕ್ಕೆ ಊರಿಗೆ ಊರೇ ಆಶ್ಚರ್ಯಪಡುವಂಥಾ ತೀರ್ಪುಕೊಟ್ಟು ಒಂದು ದೊಡ್ಡ ರಾದ್ಧಾಂತ ಮಾಡಿ ಕೊಂಡ ಈ ಪುಣ್ಯಾತ್ಮ. ಅದೊಂದು ಕ್ರಿಮಿನಲ್ ಕೇಸ್ (ಮುಕದ್ದಮೆ). ಒಂದು ಹಳ್ಳಿಯಲ್ಲಿ ಯಾರೋ ಒಬ್ಬನನ್ನು ದನದ ಹಟ್ಟಿಯಲ್ಲಿ ಕೊಲೆಮಾಡಿ ಹೂತಿದ್ದರು ಕೊಲೆಮಾಡಿದುದು ಮೃತನ ಅಳಿಯಂದಿರೇ ಎಂದು ಊರಿ ಗೆಲ್ಲಾ ಗೊತ್ತಿದ್ದರೂ, ಅವರಿಗೆಲ್ಲಾ ಬಿಡುಗಡೆಯಾಗುವುದೂ ಊರಿಗೆಲ್ಲಾ ಅಷ್ಟೇ ಖಾತ್ರಿಯಾಗಿದ್ದಿತು. ಹಣವನ್ನು ನೀರಿನ ಹಾಗೆ ಖರ್ಚುಮಾಡಿ, ಮದರಾಸಿನಿಂದ ಆಗಿನ ಕಾಲಕ್ಕೆ ಗವರ್ನರ್ ದೊರೆಗಳಷ್ಟೇ ದೊಡ್ಡವರಾದ ಬ್ಯಾರಿಸ್ಟರು ದೊರೆಗಳನ್ನು ಬರಮಾಡಿಸಿದ್ದರು. "ಆಲ್ಬಿ" (Alibi) ಗಳ ರಾಶಿಬಿದ್ದಿದ್ದುವು ಈ "ಆಲಿಬಿ", ಸಾಕ್ಷ್ಯ, ಕಾನೂನು–ಕೋಡು–ಕಲಮ್ಮು ಗಳ ಚಕ್ರವ್ಯೂಹದಲ್ಲಿ ಕೌರವರ ಹಾಗೆ, ಆಪಾದಿತ, ಕೊಲೆಗಡಕರು ಸುರಕ್ಷಿತ ರಾಗಿದ್ದರು. ಬ್ಯಾರಿಸ್ಟರ್ ಮಹಾಶಯ ಸೈಂಧವನಂತೆ ಈ ಚಕ್ರವ್ಯೂಹದ ರಕ್ಷಣೆ ಮಾಡುತ್ತಾ ಇದ್ದ. ಮದರಾಸಿನಿಂದಲೇ ಫರಂಗಿ ಬ್ಯಾರಿಸ್ಟರು ದೊರೆ ಬಂದಮೇಲೆ ನಾಕ್ಷಾತ್ತು ಯಮನ ದೂತರೇ ಬಂದು ಹೂಂಕರಿಸಿದರೂ ಭಯವಿಲ್ಲ. ಮೊದಲನೇ ಆಪಾದಿತನು ಈ ಕೊಲೆಯಾದ ಹೊತ್ತಿಗೆ ಆ ಊರಿಂದ ೫೦ ಮೈಲಿಗಳಾಚೆಗೆ ನಾಕೂರು ಮಠದ ಶ್ರೀಪಾದಂಗಳವರ ಸಮಕ್ಷಮದಲ್ಲಿ ಶ್ರೀಮನ್ನಾರಾಯಣ ಭಜನೇ ಒದರುತ್ತಿದ್ದನೆಂತಲೂ, ಎರಡನೇ ಆಪಾದಿತ ಅದೇ ಹೊತ್ತಿಗೆ ತನ್ನದೇ ಮದುವೆ ಮಂಟಪದಲ್ಲಿ ಮದುವಣಿಗನಾಗಿ ಬಾಸಿಗ ಕಟ್ಟಿಸಿಕೊಳ್ಳುತ್ತಾ ಇದ್ದನೆಂತಲೂ, ಮೂರನೇ ಆಪಾದಿತನು ಆ ಹೊತ್ತಿಗೆ ಹುಟ್ಟಿಯೇ ಇರಲಿಲ್ಲವೆಂತಲೂ, ಸಾಕ್ಷಾತ್ ಪರಮಾತ್ಮನಿಂದಲೂ, ಅಲ್ಲಗಳೆಯಲಾರದಂಥ, "ಗಟ್ಟಿ" (ಭದ್ರವಾದ) ಸಾಕ್ಷ್ಯಗಳು ಇದ್ದುವು. ಆಪಾದಿತರು ಪೋಲೀಸನವರಿಗೂ, ಸರಕಾರೀ ದೇವತೆಗಳಿಗೂ ಬೇಕಾದ ಪೂಜೆ ಪುನಸ್ಕಾರಂಗಳನ್ನೂ ಉಪಚಾರಂಗಳನ್ನೂ ನಲ್ಲಿಸಿ, ಘನಸರಕಾರವನ್ನೇ ತಮ್ಮ ಪಾಳೆಯಕ್ಕೆ ಸೇರಿಸಿಬಿಟ್ಟಿದ್ದರು. "ಲಾಕಪ್ಪಿ" (Lock-Up) ನಿಂದಲೇ ಔತಣಗಳನ್ನೂ ಏರ್ಪಡಿಸಿದ್ದರು.

ವಿಚಾರಣೆಯ ಒಂದು ಪ್ರಹಸನ ಮುಗಿದ ಕೂಡಲೇ ವಿಜೃಂಭಣೆಯಿಂದ ಮನೆಗೆ ವಿಜಯಯಾತ್ರೆ ಬೆಳೆಸುವುದಾಗಿ ಏರ್ಪಾಡಾಗಿ ಕುದುರೇಗಾಡಿಗಳನ್ನು ನಿಶ್ಚಯಿಸಿದ್ದರು. ಸಾವಿರಗಟ್ಟಲೆ ಲಡ್ಡು ತಯಾರಿಸಿ ಹಂಚುವ ಏರ್ಪಾಡೂ ನಡೆದಿತ್ತು.

"ಆದರೆ "ಐನ್ ವಖತ್ತಿಗೆ" ಅಂದರೆ ಸರಿಯಾದ ಸಂಧಿಕಾಲಕ್ಕೇ, ಷೋಡಶೋಪಚಾರಂಗಳನ್ನು ಸ್ವೀಕರಿಸಿದ ಮಹಾರಾಯ ಜಡ್ಜಿಗೆ ನೆಗಡಿಯೋ ಏನೋ ಅಂಟಿಕೊಂಡು, ರಜೆಯಲ್ಲಿ ಹೋಗಿಬಿಟ್ಟಿದರಿಂದ, ನಮ್ಮ ಹುಚ್ಚ ಮುನಸೀಫರಿಗೆ ಹಂಗಾಮಿ* ಜಡ್ಜಿ ಪಟ್ಟವಾಯಿತು. ಆದರೆ ಅದರಿಂದೇನೂ ಭಯಕ್ಕೆ ಕಾರಣವಿರಲಿಲ್ಲ ಅನ್ನಿ. "ಕೇಸ್" ಅಂದರೆ ಅಷ್ಟು ಭದ್ರವಾಗಿದ್ದಿತು. ಸಾಕ್ಷಿಗಳೆಲ್ಲಾ ಬ್ಯಾರಿಸ್ಟರು ಗುರು ಓದಿಸಿದ ಪಾಠವನ್ನು ಯಥಾಸಾಂಗವಾಗಿ ಒಪ್ಪಿಸಿದರು. ವಕೀಲ ಪ್ರಭೃತಿಗಳು, ಬ್ಯಾರಿಸ್ಟರ್ ಮಹೋದಯರು, ಅತಿ ನೈಪುಣ್ಯದಿಂದ, ಆ ಅಪಾದಿತರು ತಮ್ಮ ಮಾವನನ್ನು ಕೊಲೆಮಾಡಿದಷ್ಟೇ ಚಾತುರ್ಯ-ಕೌಶಲ್ಯಗಳಿಂದ ಸತ್ಯವನ್ನು ಕೊಲೆ ಮಾಡಿದರು. ಸರಿ; ಇನ್ನೇನು ಪಾರವಶಿತೆಯಾದ ಜಯಶ್ರೀ ಈ ವಿಟರ ಕೊರಳಿಗೆ ಹಾರ ತೊಡಿಸುತ್ತಾಳೆ—ಎನ್ನುವಷ್ಟರಲ್ಲೇ, ನಮ್ಮ ಮುನಸೀಫರಿಗೆ ಉನ್ಮಾದ ಸುರುವಾಯಿತಲ್ಲ!— "ಕೊಲೆಯಾದುದು, ಹೆಣದ ಪತ್ತೆಯಾದುದು ಎಲ್ಲಿ?" —"ಪಸುವಿನ ಹಟ್ಟಿಯಲ್ಲಿಯೇ ತಾನೆ?" —"ಆ ಹಸುಗಳನ್ನು ತಂದು ಹಾಜರ್ ಮಾಡು."

ಊರಲ್ಲೆಲ್ಲಾ ಇದೇ ಸುದ್ದಿಯಾಯಿತು. ಖೊಖ್ಖೊಖ್ಖೊ ಎಂದು ನಗದೇ ಇದ್ದ ಕೆಲವರು "ಏನೋ ಈತ ಅವಧೂತ ಮನುಷ್ಯ. ಅವನ ಆಳ ನಮಗೆ ತಿಳಿಯೋಬಿಲ್ಲ. ಸೃಷ್ಟಿಯಲ್ಲಿ ಏನು ಉಂಟು, ಏನು ಇಲ್ಲ, ಯಾರಿಗೆ ಗೊತ್ತು? ತಿಳಿಯದೇ ನಗಬಾರದು" ಎಂದುಕೊಂಡರು.

ಸರಿ, ಹುಕುಂ ಪ್ರಕಾರ ಹಸುಗಳನ್ನು ತಂದು "ಹಾಜರ್" ಮಾಡಲಾಯಿತು. ಧರ್ಮಾವತಾರರು (ಹಂಗಾಮಿ ಜಡ್ಜಿಗಳು) ಪೀನಲಕೋಡು, ಕ್ರಿಮಿನಲ ಆಕ್ಟು, ಎವಿಡೆನ್ಸ್ ಆಕ್ಟು ಇತ್ಯಾದಿ ವೇದಾಗಮಗಳನ್ನೆಲ್ಲಾ ಮೇಜಿನ ಮೇಲೆಯೇ ತೂಕಡಿಸಲು ಬಿಟ್ಟು ಆ ಹಸುಗಳ ಬಳಿಗೆ ಹೋಗಿ ಮೈದಡವಿದರು. ಮೋರೆಗೆ ಮೋರೆ ತಾಗಿಸಿ ಏನೋ ಏನೋ

* ಹಂಗಾಮಿ-ಟೆಂಪರರೀ, ತಾತ್ಕಾಲಿಕ.

ಮಾಡಿದರು. ಹಿಂದೆ ಬಂದನು. ಆ ಮನುಷ್ಯನ ನಡಿಗೆ ಒಂದು ವಿಚಿತ್ರ. ಮಂತ್ರಬದ್ಧನಹಾಗೆ, ಕಾಲು ಎಳ್ಳೋ ಸರಿದಂತೆ, ತನ್ನ ಚೇತನವಿಲ್ಲದೇ, ಭೂತ ಬಡಿದವನಂತೆ ಆತ ನಡೆಯುತ್ತಿದ್ದುದು. ಈ ಬಾರಿ, ಮೋಡ ಆಕಾಶದ ನಡುವಿನಲ್ಲಿ ಹಾದಂತೆ, ಸ್ಥಾನಕ್ಕೆ ಮರಳಿ ನಡೆದ.

ಆದಿನ ಜ್ಯೂರಿಗಳಿಗೆ ಆತ ಕೊಟ್ಟ ಭಾಷಣ ಅತಿ ಆಕ್ಷೇಪಾರ್ಹವಾದುದು. ಯಾವ ಘನ ಹೊಂದಿದ "ಅದಾಲತ್ತಿ" ನಲ್ಲೂ, ಜಡ್ಜಿಗಳು ತಮ್ಮ ನ್ಯಾಯಾಸನದಿಂದ, ಜ್ಯೂರಿಗಳಿಗೆ ಈರೀತಿಯಾಗಿ ಭಾಷಣಕೊಟ್ಟು, ನ್ಯಾಯಪರಿಪಾಲನೆಗೆ ಭಂಗತಂದಿರಲಾರರು. ಅದೂ ಅಲ್ಲದೆ, ಒಮ್ಮೆಲೇ ಉಲ್ಕೆ ಉರುಳಿದಂತೆ, ಈ ಮನುಷ್ಯನಿಗೆ ರೌದ್ರಾವೇಶ ಏರಿದ್ದಿತು. ಎರಡು ಮೂರು ತಿಂಗಳಿಂದ ಶಾಂತಿಮೂರ್ತಿಯಾಗಿದ್ದವನು ಒಮ್ಮೆಲೇ ಜ್ವರ ಹಿಡಿದವನಂತೆ ಉರಿದುಬಿದ್ದ. ಜ್ಯೂರಿಗಳಿಗೆ ಕರ್ಕಶವಾಗಿ, ಹುಬ್ಬುಗಂಟಿಕ್ಕಿ, ಹಲ್ಲುಕಚ್ಚಿ, ತನ್ನ ಮುಷ್ಟಿಯನ್ನು ಬಿಗಿದು, ಮೈ-ಮೋರೆ ಬೆವತುಕೊಂಡು ಹೇಳಿದ: "ಮನುಷ್ಯರ ಬಾಯಿಯಿಂದ ಬರುವ ಸಾಕ್ಷ್ಯವನ್ನು ನೀವೆಲ್ಲಾ ಕೇಳಿದ್ದೀರಿ. ಅದರ ಸತ್ಯಾಂಶ ನಿಮಗೆ ಗೊತ್ತಿದೆ; ನನಗೆ ಗೊತ್ತಿದೆ. ಆ ಸಾಕ್ಷ್ಯ ಬೊಂಕಿದವರಿಗೂ ಗೊತ್ತಿದೆ. ಮನುಷ್ಯನ ಬಾಯಿಯಿಂದ ಮಾತು ಬರಿಸುವುದು ಹಣ, ಮೋಸ. ಅನ್ಯಾಯ, ಸ್ವಾರ್ಥ. ಪ್ರಾಣಿಗಳ ಬಾಯಿಯಿಂದ ದೇವರು ಮಾತಾಡಿಸುತ್ತಾನೆ. ಜ್ಯೂರಿಗಳೇ; ದೇವರಿಗೆ ಹೆದರಿ; ಕಾನೂನಿಗೆ ಹೆದರಬೇಡಿ. ದೇವರಿಗೆ ಹೆದರಿ. ಕಾನೂನಿಗೆ ಕಣ್ಣಿಲ್ಲ; ಜಡ್ಜಿಗೆ ಎರಡೇ ಕಣ್ಣು. ಆದರೆ ಮೇಲೆ ಇರುವಾತನಿಗೆ ಮೂರುಕಣ್ಣು ಉಂಟು. ಜಾಗ್ರತೆ."

ಜ್ಯೂರಿಗಳು "ಎಲಾ! ಎಲಾ!" ಎಂದುಕೊಂಡರು. ಈ ಮನುಷ್ಯನ ಉರಿಗಣ್ಣು, ಮಾತಿನ ರಭಸಕೇಳಿ, "ಈ ಹುಚ್ಚ ಸಿಡಿಲಮರಿಯನ್ನು ನಾವೇಕೆ ಕೆಣಕಿ ಕೈಸುಡಿಸಿಕೊಳ್ಳಬೇಕು?" ಎಂದುಕೊಂಡು, ತಮಗೆ ಸಂದ ದಕ್ಷಿಣೆ-ಉಪಚಾರಗಳನ್ನೆಲ್ಲಾ ಮರೆತು, ಊರಿಗೆಲ್ಲಾ ಗೊತ್ತಿದ್ದಹಾಗೆ "ಅಪರಾಧಿ" (Guilty) ಎಂದು ಅಂದು ಬಿಟ್ಟರು. ಜಡ್ಜಿ ತಲಾ ಹನ್ನೆರಡು ವರ್ಷ ವಿಧಿಸಿದ.

ಆದರೆ ಇಂಥಾ ಉನ್ಮಾದಕ್ಕೆ ಕಾನೂನು ಅಸ್ತು ಅನ್ನುವುದುಂಟೇ? ಇದೇನು ಪವಾಡಗಳ ಯುಗವೇ? ತ್ರೇತಾಯುಗವೇ, ಸತ್ಯಯುಗವೇ ಹೇಗೆ?

ಇಂಥಾ ಮೂರ್ಖತನ ಸತ್ಯಯುಗದಲ್ಲೇ ಉದ್ಭವಿಸಿದರೆ ಚೆನ್ನ. ಎಲ್ಲೋ ಅಪ್ಪಿ ತಪ್ಪಿ ಕಲಿಯುಗದಲ್ಲಿ ಮೊಳೆತರೆ ಹುಚ್ಚಾಸ್ಪತ್ರೆಗೇನೇ ದಾಖಲ್ ಆಗಬೇಕು. ನಮ್ಮ ಹಂಗಾಮಿ ಜಡ್ಜಿಗಳ ತೀರ್ಪಿನ ಮೇಲೆ ಮದರಾಸು ಹಾಯಿಕೋರ್ಟಿನಲ್ಲಿ ಅಪೀಲ್ ಆಯಿತು. ತೀರ್ಪು ತಲೆಕೆಳಗಾಯಿತು. ಆಪಾದಿತರು ನಿನ್ನೆಯೇ ಹುಟ್ಟಿದ ಹಸುಗೂಸುಗಳಿಗಿಂತಲೂ ನಿಷ್ಕಲ್ಮಷ ನಿರಪರಾಧಿಗಳೆಂದು ಸಿದ್ಧವಾಯಿತು. ಹಿಂದಿನ ತೀರ್ಪಿಗೆ ಯಾವುದೇ ಸಾಕ್ಷ್ಯದ ಆಧಾರವಿಲ್ಲವೆಂದೂ ಜಾನುವಾರುಗಳ ಬಾಯಿಯಿಂದ ಸಾಕ್ಷ್ಯ ಪಡೆಯುವುದು ಯಾವ "ಕೋಡಿ" ನಲ್ಲೂ ನಮೂದಿಸಿಲ್ಲವೆಂತಲೂ, ಕೆಳ ಕೋರ್ಟಿನ ಜಡ್ಜಿ ಜ್ಯೂರಿಗೆ ಕೊಟ್ಟ ಆದೇಶ (ಭಾಷಣ) ಹಾಗೂ ಜಾನುವಾರಗಳೊಡನೆ ನಡೆಸಿದ ಆಟ ಶುದ್ಧ ಬೇಕಾಯಿದೇ ಶೀರ, ಏವಂ ಅಗದೀ ಆಕ್ಷೇಪಾರ್ಹ ಹಾಗೂ ಸಲ್ಲದ್ದು ಎಂಬುದಾಗಿ ಕೆಳ ಜಡ್ಜಿಗೆ "ಪ್ರಶಂಸೆ" (ರಿಮಾರ್ಕು) ಬಂದಿತು. ಇದರ ಮೇಲೆ, ಡಿಪಾರ್ಟ್ಮೆಂಟಿನ ಮೂಲಕ ಕೂಡಲೇ ಹಂಗಾಮಿ ಕೆಲಸ ತಪ್ಪಿಹೋಯಿತು ಮಾತ್ರವಲ್ಲ; ಮೇಲನಿಂದ ಕೆಲವು ಒತ್ತಾಯದ, ಬಲಪಂತದ, ಸೂಚನೆಗಳೂ ಬಂದುವು. ಅವುಗಳನ್ನು ಮನ್ನಿಸಿ, ಮುನಸೀಫರು ಆರು ತಿಂಗಳ ರಜೆಪಡೆದುಕೊಂಡು ಆಮೇಲೆ ರಾಜೀನಾಮೆ – "ಆರೋಗ್ಯಕ್ಕಾಗಿ" ಅಂತೆ – ಕೊಟ್ಟರು.

ಈ ವಿಚಿತ್ರ ಪುರುಷನನ್ನು ಕಂಡ ನೆನಪು ನನ್ನ ತಂದೆಯವರಿಗಿದೆ. ಅವರು ಹುಡುಗನಾಗಿದ್ದಾಗ, ಈತ ತನ್ನ ಹೆಂಡತಿಯೊಡನೆ, ಇಡೀ ಪುತ್ತೂರು ಪೇಟೆಗೇ ಏಕಮಾತ್ರವಾಗಿದ್ದ ಕುದುರೇಗಾಡಿಯಲ್ಲಿ ಕುಳಿತು ಆಚೀಚೆ ಹೋಗುವುದನ್ನೂ ಊರವರೆಲ್ಲಾ ಎದುರಿಗೆ "ನಮಸ್ಕಾರ ಹುಜೂರು" ಎಂದೂ ಹಿಂದಿನಿಂದ "ಹುಚ್ಚಪ್ಪ" ನೆಂದೂ ವಂದಿಸುವುದನ್ನೂ ಅವರು ಕಂಡಿದ್ದಾರೆ. ಒಂದು ಬಾರಿ ಅವರು ಅವನನ್ನು ಬಲು ವಿಶೇಷವಾದ ರೀತಿಯಲ್ಲಿ ಭೇಟಿಯಾದರು. ನಮ್ಮ ತಂದೆಯವರು ಗೇರುಹಣ್ಣಿನ ಅನ್ವೇಷಣದಲ್ಲಿ ಮರದಿಂದ ಮರಕ್ಕೆ ಕೊಂಬೆಯಿಂದ ಕೊಂಬೆಗೆ ಜಿಗಿಯುತ್ತಾ ಸಾಗಿದ್ದರಂತೆ. ಬಿರುಮಲೆ ಗುಡ್ಡೆಯ ಆಚೆಗೆ ಆಗ ದೊಡ್ಡ ಹುಲ್ಲುಗಾವಲಿದ್ದಿತು. ಈಗಲೋ, ಆ ಹಸುರು ಕಂಬಳಿ ಮಾಯವಾಗಿ ಭೂಮಿತಾಯಿಯ ಮೈ ಮೇಲೆಲ್ಲಾ ಮನೆ-ಮಠ, ಬಂಗಲೆ-ಗುಡಿಸಲುಗಳ ಹುಣ್ಣು ಬೊಕ್ಕೆ ಎದ್ದಿವೆ.

ಊರುಗಳಲ್ಲಿ ಎಲ್ಲೆಲ್ಲೂ ಈಗಿನ ಕಾಲದಲ್ಲಿ, ಹುಲ್ಲು-ಮರ, ಸಸ್ಯ-ಸಂಸಾರ, ತರು-ಪಲ್ಲವ ನಾಶವಾಗಿ ಹಾಳು ಅನಿಷ್ಟದ ಹೆಂಚು, ಗಾರೆ, ಇಟ್ಟಿಗೆ, ಕಲ್ಲು, ಕಂಭ, ಸಿಮೆಂಟು ಗೋಡೆ ಇತ್ಯಾದಿಗಳೂ, ಅವುಗಳೊಳಗೆ ಮಿಜಿ ಮಿಜಿಯೆಂದು ತುಂಬಿರುವ ನರ ಹುಳುಗಳನ್ನು ಕಂಡರೆ, ಬೇಗನೇ ಪ್ರಕೃತಿ ಯೆಂಬ "ಮ್ಹಾಲು" ಈ ಸೃಷ್ಟಿಯ "ಬಾಜಾರಿ" ನೊಳಗಿಂದ ಕಣ್ಮರೆಯಾಗು ವುದೇ ಎಂದು ಭಯವಾಗುತ್ತದೆ.

ಆ ಕಾಲದಲ್ಲೋ, ಅಲ್ಲಿ ಕಣ್ಣು ಹೋಗುವಷ್ಟು ದೂರ ನಾಲ್ಕೂ ಸುತ್ತಲೂ ಹಸುರು ಕಂಬಳಿಯಂಥಾ ಹುಲ್ಲುಗಾವಲಿತ್ತು. ಅದರ ಮೂಲೆ ಯಲ್ಲೊಂದು ಹುಲ್ಲು ಹೊದೆದ ಬಂಡೆಯಿತ್ತು. ಹುಲ್ಲುಗಾವಲಲ್ಲೆಲ್ಲಾ ದನಕರು ಗಳು ಸ್ವೇಚ್ಛೆಯಾಗಿ ಗುಟುರೆ ಹಾಕುತ್ತಾ ಬಾಲವನ್ನು ಚಾಮರದ ಹಾಗೆ ಅಲಂಕಾರವಾಗಿ ಬೀಸಿಕೊಳ್ಳುತ್ತಾ, ಕರುಗಳು ಒಂದರೊಡನೆ ಇನ್ನೊಂದು ಚೆಲ್ಲಾಟವಾಡುತ್ತಾ ಇದ್ದುವಂತೆ. ನಮ್ಮ ತಂದೆಯವರು—ಆಗ ಬರೇ ಹುಡುಗ ಅಂದೆನಷ್ಟೇ—ಹುಲ್ಲುಗಾವಲಿಗೆ ಬಂದರಂತೆ. ಆಗ ಆ ಬಂಡೆಯ ಮೇಲೆ ಯಾರೋ ಒಬ್ಬ ವ್ಯಕ್ತಿ ಕುಳಿತುಕೊಂಡು, ಗಟ್ಟಿಯಾಗಿ, ರಾಗವಾಗಿ ದನಗಳನ್ನು ಗೊಲ್ಲರು ಕೂಗುವಹಾಗೆ ಸಿಳ್ಳುಹಾಕುತ್ತಾ ಪದಾ ಹಾಡುತ್ತಾ ಕೂಗುತ್ತಿದ್ದನಂತೆ. ಹಾಡುಮಾತ್ರ ಅರ್ಥವಾಗುತ್ತಿರಲಿಲ್ಲ. ಏನೋ ಕನ್ನಡದ ಹಾಗೆ ಕೇಳಿಸುತ್ತಿತ್ತು. ಆದರೆ ನಮ್ಮೂರ ಕನ್ನಡ ಸರ್ವಥಾ ಆಗಿರಲಿಲ್ಲ.† ನಮ್ಮ ತಂದೆಯವರಿಗೇನೂ ಅರ್ಥವೇ ಆಗದೇ ಇದ್ದರೂ, ಆ ದನಗಳಿಗೇನೋ ಚೆನ್ನಾಗಿ ತಿಳಿದಂತೆ ತೋರುತ್ತಿತ್ತು. ಅವುಗಳೆಲ್ಲಾ ಈಚಿಗೆ ಬಂದು, ಕಿವಿ ನಿಗುರಿಸಿ, ಧ್ಯಾನದಿಂದ ಕೇಳಿ ಆಲಿಸಿ, ನಿಧಾನವಾಗಿ—ದನಗಳು ನಿಧಾನ ವಾಗಿ ಗಂಭೀರವಾಗಿ ನಡೆಯುವುದನ್ನು ನೀವು ದಿಟ್ಟಿಸಿ ನೋಡಿದ್ದೀರಾ? ಆ ನಡೆಗೊಂದು ಹೇಳಲಾರದ ವರ್ಣಿಸಲಾರದ ಗಾಂಭೀರ್ಯ, ಅಂದ, ಒನಪು ಇದೆ; —ಆ ಮನುಷ್ಯನ ಬಳಿಗೆ ಬಂದುವು. ನಮ್ಮ ತಂದೆಯವರ ಕುತೂಹಲ ಕೆದರಿತು. ಆ ಮನುಷ್ಯ ದನಾಕಾಯುವ ಗೋವಳನ ಹಾಗೆ ಕಾಣಿಸುತ್ತಿರ ಲಿಲ್ಲ. ಬಿಳೇಬಟ್ಟೆ ತೊಟ್ಟಿದ್ದು ತೋರುತ್ತಿತ್ತು. ಕಾಲಲ್ಲಿ ಜೋಡೂ ಕಾಣಿ ಸುತ್ತಿತ್ತು. "ಯಾರಪ್ಪಾ ಇದು?" ಎಂದುಕೊಂಡು, ಆ ಬಂಡೆಯ ಬಳಿಗೆ ಹೋದಾಗ—ಹುಚ್ಚ ಮುನಸೀಫರು ! !

---

† ನಮ್ಮದು ತುಳುನಾಡು ಊರು. ಮಂಗಳೂರು ಕಡೆ.

ಮುನಸೀಫರಿಗೆ ನಾಚಿಕೆಯಾಗಿರಬೇಕೆಂದು ಕಾಣುತ್ತದೆ. ದೊಡ್ಡ ಮನುಷ್ಯ, ಪ್ರತಿಷ್ಠಿತ, ಅನ್ನಿಸಿಕೊಳ್ಳುವಾತ, ದನಕಾಯುವವನ ಹಾಗೆ, ಸಿಳ್ಳು ಹಾಕುತ್ತಾ, ಪದಾ ಹಾಡುತ್ತಾ, ಕೇಕೆಹಾಕುವುದು ನಾಚಿಕೆಯಲ್ಲದೆ ಬೇರೆ ಏನು? ಅದನ್ನು ಯಾರಾದರೂ ಕಂಡರಂತೂ, ಆತನಿಗೆ ನಾಚಿಕೆಯಿಂದ ಸತ್ತಹಾಗೆ ಆಗಬೇಕು. ಆ ಮಹಾರಾಯ ಈ ಹುಡುಗನನ್ನು (ನಮ್ಮ ತಂದೆ) ಕಂಡಕೂಡಲೇ ಧಿಗ್ಗನೆದ್ದು, "ಎಲೋ, ಯಾರೋ ಅದು? ಪೋಲೀಸ್ ಕರೀತೇನೆ" ಎಂದು ಅಬ್ಬರಿಸುತ್ತಾ ನನ್ನ ತಂದೆಯವರನ್ನು ಗದರಿಸಿ ಓಡಿಸಿ ಬಿಟ್ಟನಂತೆ. ನಮ್ಮ ತಂದೆಯವರಿಗೆ ಆ ಕತೆ ನೆನಪಾದಾಗೆಲ್ಲಾ, ಆ ಮನುಷ್ಯ ತನ್ನ ಮಾನ ಉಳಿಸಿಕೊಳ್ಳಲು ಮಾಡಿದ ಆ ಆರ್ಭಟ ಆಟೋಪಗಳನ್ನು ನೆನೆದು ಹೊಟ್ಟೆ ಹುಣ್ಣಾಗುವಂತೆ ನಗು ಉಬ್ಬರಿಸಿ ಬರುತ್ತದೆ.

\+ + + + + +

ಒಂದೈವತ್ತು ವರುಷಗಳ ಹಿಂದಕ್ಕೆ, ಘಟ್ಟದ ಮೇಲಿನ ಊರಿನಲ್ಲಿ (ಅಂದರೆ ಮೈಸೂರು ಸೀಮೆಯ ಕಡೆ) ಘೋರವಾದ ಬರಗಾಲ ಬಂತು. ಹುಲ್ಲೆಲ್ಲಾ ಒಣಗಿ ಸುಟ್ಟು ಮಣ್ಣಾಯಿತು. ಘಟ್ಟದ ಮೇಲಿನ ಜನರು ಬಹಳವಾಗಿ ದನ ಕರು, ಜಾನುವಾರು ಸಾಕುತ್ತಾರೆ. ನಮ್ಮ ಊರಿಗೆ ದನ ಕರುಗಳ ಸರಬರಾಜು ಇವರದೇ. ನಮ್ಮಲ್ಲಿ ಕುಕ್ಕೇ ಷಷ್ಠಿಯ ಕಾಲಕ್ಕೆ ಕುಳುಕುಂದದಲ್ಲಿ ನಡೆಯುವ ಪ್ರಚಂಡ ಜಾತ್ರೆಗೆ ಘಟ್ಟದ ಮೇಲಿಂದ ಲಕ್ಷಾರು (ಪೈರು) "ನಡೆ" ಬರುತ್ತವೆ. ಈ ಘಟ್ಟದ ಮೇಲಿನ ನಂದಗೋಪರು ಈ ಗೋಸಂಪತ್ತನ್ನು ಮೇಯಿಸಿಕೊಂಡು, ಎಷ್ಟೋ ಗಾವುದ ಬೆಟ್ಟ ಕಣಿವೆ ಕಾಡು ದಾಟಿಕೊಂಡು ಬರುತ್ತಿರುತ್ತಾರೆ. ಸೊಂಟದಲ್ಲೊಂದು ಲಂಗೋಟಿ, ಹೆಗಲಮೇಲೊಂದು ದಪ್ಪನಾದ, ಹತ್ತು ಜನರನ್ನೂ, ನಾಲ್ಕು ಆಕಳುಗಳನ್ನೂ ಸುತ್ತುವಷ್ಟು ವಿಶಾಲವಾದ, ನಾರುವ ಕಂಬಳಿ; ತಲೆಯಮೇಲೆ ಬೆಟ್ಟದ ಗಾತ್ರದ ಮುಂಡಾಸು; ಈ ವೇಷಭೂಷಣಗಳಿಂದ ಶೋಭಿತರಾಗಿ ಘಟ್ಟದ ಮೇಲಿನ ಕನ್ನಡ ಒದರುತ್ತಾ ಬರುತ್ತಾರೆ. ತುಳು ಜನರಾದ ನಮಗೆ ಅವರ ಮಾತಿನಲ್ಲಿ ಅರ್ಧಕ್ಕರ್ಧ ಗೀರ್ವಾಣವೇ ಆಗಿರುತ್ತೆ.

ಹೇಳಿದೆನಲ್ಲಾ: ಒಂದೈವತ್ತು ವರುಷಗಳ ಹಿಂದೆ; ಈ ಘಟ್ಟದ ಮೇಲಿನ ಹುಲ್ಲು ಸೀಮೆಗೆ ಒಣಕಾಲ, ಮಿಡಿತೆಗಳ ಪಡೆ, ಎಲ್ಲಾ ಬಂದುವು. ಭೂಮಿ

ತಾಯಿಯ ಹಸುರು ಸೀರೆ ಸುಟ್ಟು, ಅವಳ ಹುಣ್ಣು ಬೊಕ್ಕೆಗಳಿಂದ ಒಡೆದು ಜರ್ಝರವಾದ ಒಣಗಿದ, ಸೊರಗಿದ, ಎಲುಬಿನ ಹಂದರ ವಿಕಟವಾಗಿ ಕಾಣಿಸತೊಡಗಿತು. ಭೂಮಿತಾಯಿಯಾದರೊ ಅಮರೆ. ಅವಳು ಒಣಗಲಿ. ಸೊರಗಲಿ; ಅವಳಿಗೆ ಸಾವಿಲ್ಲ. ಅವಳ ಸಂತಾನಕ್ಕೆ ಮಾತ್ರ ಪ್ರಾಣಕ್ಕೇ ಸಂಚಕಾರ. ದನ-ಕರು ಹುಳುಗಳಂತೆ ಟಪಟಪ ಸಾಯತೊಡಗಿದುವು., ಮನುಷ್ಯರ ಮತ್ತು ದನ-ಕರುಗಳ ಹೆಣಗಳು ಆ ಕಾದ ಮಸಣದಲ್ಲಿ ರಣ-ಹದ್ದುಗಳಿಗೆ ಔತಣವಾದುವು. ಜನ ಕಣ್ಣಿಲ್ಲದ ದೇವರನ್ನು ಶಪಿಸುತ್ತಾ ತಮ್ಮ ದನಕರುಗಳ ಅಸ್ಥಿಪಂಜರಗಳನ್ನು ಅಟ್ಟಿಕೊಂಡು ಊರುಬಿಟ್ಟು ಹೋದರು. ಎಷ್ಟೋ ಜನ ತಮ್ಮ ತಮ್ಮ ಮಂದೆಗಳನ್ನು ಹೊಡೆದುಕೊಂಡು ನಮ್ಮ ಊರಿಗೆ ಬಂದರು.

ನಮ್ಮ ಊರಿಗೆ ಬಂದಾಕ್ಷಣವೇನೂ ಅವರ ಸಂಕಟ ಪರಿಹಾರವಾಗಲಿಲ್ಲ. ಅವರ ದನಕರುಗಳಿಗೆ ಅನಾಹಾರದಿಂದ, ಹಾಳು ಸವಳು ನೀರು ಕುಡಿದುದರಿಂದ, ಏನೇನೋ ರೋಗರುಜನ ಹಿಡಿದಿತ್ತು. ನಮ್ಮೂರ ದನಗಳಿಗೂ ಈ ರೋಗ ಅಂಟಲು ಆರಂಭವಾಯಿತು. ಹಾಗಾಗಿ ಯಾರೂ ಈ ರೋಗ ಹಿಡಿದ ದನಕರುಗಳನ್ನು ಕೊಂಡುಕೊಳ್ಳಲು ಇಷ್ಟಪಡಲಿಲ್ಲ. ಹಾದಿಯಲ್ಲಿ ಹೋಗುವ ಮಹಾಮಾರಿಯನ್ನು ಯಾರುತಾನೇ "ಭಾಗ್ಯಾದ ಲಕ್ಷ್ಮೀ ಬಾರಮ್ಮ" ಎಂದು ಹಟ್ಟಿಗೆ ಬರಮಾಡಿಸುತ್ತಾರೆ ?

ಕೆಲವೇ ಜನ ಕೆಲ ಕೆಲವೇ ಮಂದೆಗಳೊಡನೆ ಬಂದಿದ್ದರೆ, ಅವರ ಹೊಟ್ಟೆಯ ಉಪಚಾರ, ಹಳ್ಳಿ ಜನರ ಆತಿಥ್ಯದಿಂದಲೇ ಸಾಗಬಹುದಿತ್ತು; (ಅಂದರೆ ಆಗಿನ ಕಾಲ ಅನ್ನಿ. ಈ ದರಿದ್ರ ಕಾಲದಲ್ಲೋ, ಆತಿಥ್ಯ ಎಂಬ ಬಾಬತು ಹೋಟೇಲಿನವರಿಗೇ ಸಂದುದು) ಆದರೆ ಈ ಬಾರಿ ನೂರಾರು ಜನ ದಿನದಿನಕ್ಕೂ ತಂಡತಂಡವಾಗಿ, ತಮ್ಮ ಎಲುಬಿನ ಗೂಡುಗಳಾದ ಜಾನುವಾರುಗಳೊಡನೆ ಬರುತ್ತಿದ್ದರು. ಆದುದರಿಂದ ಅವರ ಹೊಟ್ಟೆ ಹೊರೆಯುವುದೊಂದು ಕಠಿನವಾಯಿತು. ಎಷ್ಟೋ ಊರುಗಳವರು ಆ ರೋಗ ಅಂಟಿದ ಮಂದೆಗಳು ತಮ್ಮ ಹುಲ್ಲುಗಾವಲುಗಳಿಗೇ ಸೋಂಕಬಾರದೆಂದೂ ವಿಧಿಸಿದರು. ಈ ಹತಭಾಗ್ಯ ಜನರ ಅವಸ್ಥೆ ಭಯಂಕರವಾಯಿತು. ಹೊಟ್ಟೆಗಿಲ್ಲ. ಸಾಯಲೇನೋ ತುದಿಗಾಲಮೇಲೇ ಇದ್ದರನ್ನಿ. ಆದರೆ

ದನಕರುಗಳ ಅಸ್ಥಿಪಂಜರವನ್ನು ಕಂಡು ಕರುಳು ಉರಿಯುತ್ತಿತ್ತು. ಆದರೆ ಅವುಗಳ ರೋಗಗಳಿಂದ ಊರ ಜನರು ಅವನ್ನು ಹತ್ತಿರ ಬರಗೊಡಿಸಲೂ ಹೆದರುತ್ತಿದ್ದರು. ಏಕೆಂದರೆ ಜಾನುವಾರುಗಳಿಗೆ ರೋಗ ಸೋಂಕಿದರೆ ಸೀಮೆಗೆ ಸೀಮೆಯೇ ಬೋಳಾಗಿ, ಬರಿದಾಗಿ, ಜಾನುವಾರುಗಳ ಮಸಣ ವಾಗುತ್ತದೆ.

ಆ ದರಿದ್ರಕಾಲದಲ್ಲಿ, ಒಂದು ದಿನ ಸುಳ್ಯದ ಹತ್ತಿರದ "ಪಾಡ" ಎಂಬ ಊರಿಗೆ ವಲಸೆಯಾಗಿ ಬಂದಿದ್ದ ಒಂದು ಘಟ್ಟದ ಮೇಲಿನವರ ಸಂಸಾರ ಊರಿನ ದೊಡ್ಡ ಮನೆಗೆ ಹೋಯಿತು. ಒಳ್ಳೇ ಸ್ಥಿತಿವಂತರಾದ ‡ಬಿಲ್ಲವರ ಮನೆ. ಘಟ್ಟದ ಮೇಲಿನವ ಮನೆಯೆದುರುನಿಂತು, ದಮ್ಮಯ್ಯ ಗುಡ್ಡೆಹಾಕಿ "ಎರಡು ಆಕಳು ಕೊಂಡುಕೊಳ್ಳಿ, ನಿಮ್ಮ ಧರ್ಮ" ಎಂದು ಅಂಗಲಾಚಿದ. ದನಗಳೇನೋ ನೋಡಲು ಲಕ್ಷಣವಾಗಿದ್ದುವು. ಆದರೆ ಬಡವಾಗಿ ಸೊರಗಿದ್ದುವು.—ಮಾತ್ರವಲ್ಲ, ಅವುಗಳ ಮೈಮೇಲೆ ರೋಗದ ಚಿಹ್ನೆ ಯಮುನ ನೆರಳಿನ ಹಾಗೆ ಸ್ಪಷ್ಟವಾಗಿ ಮೂಡಿತ್ತು. ಹಾದಿಯಲ್ಲಿ ಹೋಗುವ ಮಾರಿಯನ್ನು ಯಾರು ಮನೆಯೊಳಗೆ ಕರೆಯುತ್ತಾರೆ? "ನಮಗೆ ದನಕರು ಬೇಡಾ! ಒಳ್ಳೇ ಮಾತಿನಲ್ಲಿ ಇಲ್ಲಿಂದ ನಿನ್ನ ರೋಗಹಿಡಿದ ದನಕರು ಅಟ್ಟು; ಇಲ್ಲವಾದರೆ ನಾವೇ ಓಡಿಸಬೇಕಾಗುತ್ತದೆ" ಎಂದು ಅಬ್ಬರಿಸಿದರು. ಘಟ್ಟದ ಮೇಲವನಿಗೆ ಏಕಾದಶಿ ಆಚರಿಸಿ ಆಚರಿಸಿ ಜೀವ ಮೇಲೆ ಬಂದಿದ್ದಿತು. ಆತ ಅಲ್ಲೇ ಕುಕ್ಕರಿಸಿಬಿದ್ದ.

ಆತನೊಡನೆ ಒಬ್ಬ ಹುಡುಗನೂ ಇದ್ದನು. ಮುದಿಯ ಅನುತ್ತಾ: "ತಂದೇ, ನಮ್ಮಪ್ಪಾ, ತಾಯೇ, ಆಕಳು ನಿಮಗೆ ಬೇಡಾ ಸರಿಯೇ. ಆಕಳ ಮಾರಾಟ ಏನು ಮಾಡಲಿ ನಾನು? ನನ್ನ ಹಣೇಬರಹ. ಹಸಿವಿನಿಂದ ಸಾಯುತ್ತಾ ಇದ್ದೇನೆ. ದನಾಕರು ಸಾಯೋದನ್ನ ಕಣ್ಣಲ್ಲಿ ಕಂಡಿದೇನೆ; ನನ್ನ ಹೆಂಡತಿ ಸಾಯೋದನ್ನ ಕಣ್ಣಲ್ಲಿ ಕಂಡಿದೇನೆ. ನನ್ನ ಮೂರು ಹೂವಿನಂಥಾ ಮಕ್ಕಳೂ ಹೋದವು. ಕೊಟ್ಟವನೇ ಕೈಚಾಚಿ ಎಲ್ಲಾ ಬಾಚಿಕೊಂಡು ಹೋದ. ಅವನ ಇಷ್ಟ. ಈಗ ಈ ಹೈದ ಒಬ್ಬನೇ ಉಳಿ

‡ ತುಳುನಾಡಿನ ಒಂದು ಜಾತಿ. ಭವ್ಯವಾದ ಇತಿಹಾಸವುಳ್ಳದು. ತುಳುನಾಡಿನ ಚರಿತ್ರ ಪ್ರಸಿದ್ಧ. ಕೋಟಿ-ಚೆನ್ನಯರು ಈ ಜಾತಿಯುವರು.

ದಿದಾನೆ. ನೀವು ಸುಬ್ರಮಣ್ಯದ§ ಅಪ್ಪನನ್ನ ನೆನಸಿ, ವಸೀ ಅಕ್ಕಿ ಕೊಟ್ಟರೆ, ನಿಮ್ಮ ಹೆಸರು ಹೇಳಿ ಬದುಕಿಕೋತೇವೆ" ಎಂದು ಏನೋ ಏನೋ ಅವನ ಘಟ್ಟದ ಮೇಲಿನ ಭಾಷೆಯಲ್ಲಿ† ಗೋಗರೆದ. ಇವನಂಥಾ ಗತಿಹೀನರು ಇದೇ ಅವಸ್ಥೆಯಲ್ಲಿ ಅಂಡಲೆಯುತ್ತಿರೋ ಹೊತ್ತಿಗೆ, ಒಬ್ಬೊಬ್ಬನಿಗೆ ಧರ್ಮ-ದಾನ ಮಾಡಲು ಯಾರಿಗೆ ತ್ರಾಣ ಇರುತ್ತದೆ? ಇದೇನು ಮನೆಯೆ? ಧರ್ಮ ಛತ್ರವೇ? ಘಟ್ಟದ ಮೇಲಿನವ ಗೋಗರೆಯತೊಡಗಿದ: "ಅಪ್ಪಾ ದ್ಯಾವ್ರೇ, ನಾ ಸತ್ತರೆ ಒಂದು ಮುದಿಜೀವಾ. ನಾಳೆ ಮಣ್ಣು ಮುಕ್ಕೋವಂಥಾದ್ದು; ಈ ಹೈದ್ನ ಜೀವಾ ಉಳಿಸೋ ಪುಣ್ಯಮಾಡೀ.'' ಅಂದ.

ಆ ಹೊತ್ತಿಗೆ ಮನೆಯ ಹೆಂಗಸು ಹೊರಗೆ ಬಂದಳು. ಆ ಹೈದನ್ನ ನೋಡಿದಳು. ಹುಡುಗ ಹೊಟ್ಟೆಗಿಲ್ಲದೆ ಸೊರಗಿದ್ದರೂ ಲಕ್ಷಣವಾಗಿ ಮಾಟವಾಗಿದ್ದ. ಅವನ ಗುಳಿಬಿದ್ದ ಕಣ್ಣು, ಪಾತಾಳಕ್ಕೆ ಸರಿದ ಕೆನ್ನೆ, ಗಲ್ಲ, ಚೇತನವಿಲ್ಲವೆಂಬಂತಹ ದೇಹ ಕಂಡು ಹೆಂಗಸಿನ ಕರುಳು ಕುಯಿದಂತಾಯಿತು. ಆ ಮನೆಗೆ ದೇವರು ಏಕೋ ಮಕ್ಕಳ ವರಪ್ರಸಾದ ಕೊಟ್ಟಿರಲಿಲ್ಲ. —ಏನೋ ಒಮ್ಮೆ ಮರತು ಕೈತಪ್ಪಿಕೊಟ್ಟ ವರವನ್ನು ಅವಸರವಸರವಾಗಿ ಹಿಂದೆ ಕಿತ್ತುಕೊಂಡಿದ್ದ.

ಯಜಮಾನಿತಿ: " ಏನೋ, ನಿನ್ನ ಮಗುವನ್ನು ಸಾಕಿಕೊಳ್ಳೋ ತ್ರಾಣ ನಿನಗಿಲ್ಲ. ನನಗೆ ಕೊಡು; ನಿನ್ನ ಆಕಳಿನ ಬೆಲೆ ಕೊಡುತ್ತೇವೆ. ನಿನ್ನ ಮಗುವನ್ನು ನಾನು ನನ್ನ ಹೊಟ್ಟೆಯ ಕೂಸಿನಂತೆ ನೋಡಿಕೊಳ್ಳುತ್ತೇನೆ. ನನಗೂ ಒಂದು ಪರಬ್ರಹ್ಮವಾಯಿತು. ಹುಡುಗನಿಗೂ ಒಂದು ಮನೆಯಾಯಿತು. ತಾಯಿ ಸಿಕ್ಕಿದಂತಾಯಿತು; ನಿನಗೂ ಗತಿಕಂಡಹಾಗೆ ಆಯಿತು. ಹೊಟ್ಟೆಗೆ ಪಸೆ ಆಯಿತು."

ಘಟ್ಟದಮೇಲಿನಾತ ಕೇಳಲಿಲ್ಲ. ತನ್ನ ರಕ್ತದ ಕೊನೆಯ ಅಳಿದುಳಿದ ಬೀಜ; ಅದನ್ನು ಬಿಡಲೇ; ಎಂದು ಕೇಳಿದ. ಆದರೆ ಹೆಂಗಸಾದವಳಿಗೆ

---

§ ಸುಬ್ರಹ್ಮಣ್ಯದ ಷಡಾನನೂ ಕುಂಕುಮರಕ್ತವರ್ಣನೂ ಆದ ರುದ್ರಸೂನು ಸುಬ್ರಹ್ಮಣ್ಯಸ್ವಾಮಿ ದೇವರು (ಮುರುಗನ್, ಸುಬ್ಬಪ್ಪ).

† ಘಟ್ಟದ ಮೇಲಿನ ಭಾಷೆ ತುಳುವನಾದ ನನಗೆ ಹೇಗೆ ಗೊತ್ತಿರಬೇಕು? ನನಗೆ ಮಹಿಷೂರು ಭಾಷೆ ಬಾರದು.

ಇಂಥಾ ಪ್ರಸಂಗಗಳಲ್ಲಿ ಮಾತುಗಾರಿಕೆ ಎಲ್ಲಿಂದಲೋ ಕಾರಂಜಿಯಂತೆ ಪುಟಿಯುತ್ತದೆ: "ಮಗನನ್ನು ಸಾಕುವ ಶಕ್ತಿ ನಿನಗಿಲ್ಲ. ಅವನನ್ನು, ಆ ಕಂದನನ್ನು ಉಪವಾಸ ಸಾಯಿಸುತ್ತೀಯಾ? ಇದು ಮಮತೆಯೋ ಕಟುಕತನವೋ?''

ಬಡಪಾಯಿಗೆ ಉಭಯಸಂಕಟವಾದಂತೆ ಆಗಿರಬೇಕು. ಕೊನೆಗೆ ಹಲ್ಲುಕಚ್ಚಿ, ಎದೆ ಕಲ್ಲುಮಾಡಿ, ಕರುಳ ಕಡಿತವನ್ನು ಅದುಮಿ, ಹುಡುಗನನ್ನು ಒಪ್ಪಿಸಿದ. ಆದರೆ ಹುಡುಗನೇ ರಂಭಾಟಮಾಡಿದ. ಅತ್ತು ಆರ್ಭಟಿಸಿದ. ತಂದೆ ಬುದ್ಧಿ ಹೇಳಿ ಎಚ್ಚರಿಕೆಕೊಟ್ಟ. "ತಾಯಿ, ಬೇಡಾ ಅಂತ ಸಾರಿ ಸಾರಿ ಹೇಳಿದ್ದೇನೆ, ಮತ್ತೆ ನನ್ನ ದೂರಬೇಡಿ; ದನಾಕರು ಮಂದೆಯೊಳಗೆ ಎಳೆಗರುವಿನ ಹಾಗೆ ಬೆಳೆದ ಹೈದ. ನಿಮ್ಮ ಊರ ರೀತಿ, ಮನೆ ಬಾಳು-ಬದುಕು ಒಗ್ಗಾಕ್ಕಿಲ್ಲ ಅದಕ್ಕೆ; ನಮ್ಮ ಬದುಕೇ ಬೇರೆ. ದನಾಕರು ನಮ್ಮ ಬಳಗಾ ಸಂಸಾರಾ; ನಿವ್ ಗದ್ದೇ ಬೇಸಾಯಕ್ಕೆ ಹೇಳಿಸಿದ ಆಳು ಮಗನಲ್ಲಾ .. " ಎಂದು.

ಹೆಂಗಸು: "ಅಯ್ಯೋ ದೇವರೇ! ಏನು ಮಾತು; ತಾಯಿಯಿಲ್ಲದ ತಬ್ಬಲೀನ್ನ ನಾನು ಆಳು ಮಗನಾಗಿ ಕೊಂಡುಕೊಂಡೇನೇ? ದೇವರ ದಯದಿಂದ ನಮಗೆ ಆಳು ಮಕ್ಕಳು ಒಕ್ಕಲುಗಳಿಗೆ ತತ್ವಾರ (ಕಡಿಮೆ) ಇಲ್ಲ. ನಮಗೆ ಈ ಮಗು ಮಗನಾಗಿ, ಮನೇಮಗನಾಗಿ ಬೇಕಾಗಿದ್ದಾನೆ'' ಎಂದಳು.

ಘಟ್ಟದ ಮೇಲವ, ರಕ್ತದ ಗುಟುಕನುಂಗಿ, ಅಳುತ್ತಾ ಹಠಮಾಡುತ್ತಿದ್ದ ಹುಡುಗನನ್ನು: "ಬಸವಾ; ಇದ್ ನಿನ್ನ ತಾಯಿ; ಅದ್ ನಿನ್ನ ಅಪ್ಪ ಎಂದು ತಿಳಿದುಕೋ. ನಿನ್ನ ಹುಟ್ಟಿಗೆ ಹಾಳು ಹೆಸರು ತಂದೀಯೋ ಬೇರೆ" ಎಂದು ಗದರಿಸಿ ಮೋರೆತಿರುವಿ, ಹಿಂದೆ ನೋಡದೆ "ರಕ್ತದ ಋಣಾ ಕಡೀತು ಇಂದಿಗೆ'' ಎನ್ನುತ್ತಾ ಹೋದ.

\+ \+ \+ \+ \+ \+

ಬಸವನನ್ನು ಮನೆಯೊಳಗೆ ಸೇರಿಸಿ, ಮನೆಯವನನ್ನಾಗಿ ಮಾಡಲು ತುಂಬಾ ಕಷ್ಟವಾಯಿತು. ಹುಡುಗನಿಗೆ ಈಗಲೇ ವರ್ಷ ಹತ್ತಾಗಿತ್ತು. ಅವನ ಮನಸ್ಸು, ಮಮತೆ ಎಲ್ಲಾ ಇದಾಗಲೇ ಬೇರುಬಿಟ್ಟು ಆಗಿತ್ತು. ಬಯಲಿಂದ ಬಯಲಿಗೆ ದನಕರುಗಳೊಡನೆ ಅಲೆದಾಡುತ್ತಿದ್ದ ಆ ಜೀವಕ್ಕೆ, ಮನೆ, ಗದ್ದೆ, ಹೆಂಗಸಿನ ಮೋರೆ–ಮುದ್ದಾಟ, ಇವುಗಳ ನಿರ್ಬಂಧವೊಂದು ಪಂಜರದ

ಹಾಗೆ ಆಗಿತ್ತು. ಅವನನ್ನು "ತಮ್ಮವನನ್ನಾಗಿ", "ನಾಗರಿಕ" ನನ್ನಾಗಿ ಮಾಡುವ ಮೊದಲನೇ ಹೆಜ್ಜೆಯಾಗಿ ಅವನ ಹೆಸರನ್ನು ಬದಲಾಯಿಸಿದರು. "ಬಸವ" ಎಂಬ ಆ ಗೋಸಂಸಾರದ ಹೆಸರು ಇರುವಷ್ಟು ಕಾಲ, ದನಕರುಗಳೇ ಆತನ ಬಳಗವಾಗಿರುತ್ತವೆ. ಆ ಹಿಂದಿನ ಬಾಳು ಆ ಹತ್ತು ವರುಷಗಳ ಜೀವನ, ಅಳಿಸಿ ಹೋದ ರಂಗವಲ್ಲಿಯಂತೆ ಉಜ್ಜಿ, ಮರೆತು, ಕಾಣದೆ, ಲಯವಾಗಿ ಹೋಗಬೇಕೆಂದು ಹೊಸ ತಂದೆತಾಯಿಗಳ ಆಸೆ. ''ಬಸವ'' ಎಂಬ ಹೆಸರನ್ನು ತೊಡೆದುಹಾಕಿ, ''ಸುಂದರಪ್ಪ'' ಎಂದು ಹೆಸರಿಟ್ಟರು. ಹುಡುಗನ ರೂಪಕ್ಕೂ ಈ ಹೆಸರು ಒಪ್ಪುತ್ತಿತ್ತು.

ಆದರೆ ಹುಡುಗ ಮಾತ್ರ ''ಬಸವ'' ನಾಗಿಯೇ ಇರಲು ಇಚ್ಛಿಪಟ್ಟಂತೆ ಇತ್ತು. ಒಂದು ದಿನ ಬೆಳಗ್ಗೆ ಒಮ್ಮೆಗೇ ಕಾಣದಾದ ಹುಡುಗನ ಪತ್ತೆಯಿಲ್ಲೆಂದು ತುಂಬಾ ಹುಡುಕಾಡಿದರು. ಕೊನೆಗೆ ಕತ್ತಲಾಗುವ ಹೊತ್ತಿಗೆ ಎಂಟು ಮೈಲಿ ದೂರದ ಬೈಲಿನಿಂದ ದನಗಳ ಒಂದು ದೊಡ್ಡ ಮಂದೆಯೊಡನೆ ಕಾಲುಹಾಕುತ್ತಿದ್ದ ಹುಡುಗನ ಪತ್ತೆಯಾಯಿತು. ಎಳೆದು ಮನೆಗೆ ತಂದು ಚೆನ್ನಾಗಿ ಬಾರಿಸಿದರು—''ಏಕೆ ಓಡಿ ಹೋದೆ?— ಈ ಮನೆಯಲ್ಲಿ ಯಾತರ ಸುಖಕ್ಕೆ ಕಡಿಮೆಯಾಯಿತು? ಹಾಲು ತುಪ್ಪ, ಉಡುಪು ತೊಡಪು, ತಾಯಿಯ ಮುದ್ದು-ಮೋಕೆ ಎಲ್ಲಾ ಇದ್ದೂ ಹೀಗೆ ಮಾಡಿದೆಯಾ ಕೃತಘ್ನ?'' ಎಂದು ಕೇಳಿದರೆ, ಆ ಹುಡುಗ ಮೋರೆ ಕೆಳಹಾಕಿ ''ಆ ಹಸುಗೋಳು ನನ್ನ ಕೂಗಿದ್ವು." ಅಂದ. ಹುಡುಗನಿಗೆ ಇಷ್ಟರೊಳಗೇ ತುಳುಮಾತಾಡಲು ಬರುತ್ತಿತ್ತು. ಆದರೆ ಮನಸ್ಸಿನಲ್ಲೇನಾದರೂ ಉದ್ವೇಗವೆದ್ದಾಗ, ಥಕ್ಕನೇ ಘಟ್ಟದ ಮೇಲಿನ ಭಾಷೆಯಲ್ಲಿ ಮಾತು ಉಕ್ಕಿಬರುತ್ತಿತ್ತು.

ಶಾಲೆಗೆ ಸೇರಿಸಿದಾಗಲೂ ಹೀಗೇ ಆಯಿತು. ಶಾಲೆಗೆ ಎಂದು ಕಳಿಸಿದರೆ, ಹುಡುಗ, ದನಗಳ ಮಂದೆಯ ಹಿಂದೆ ಅವುಗಳ ಕೊರಳಗಂಟೆಯಿಂದ ಮಂತ್ರಬದ್ಧನಾದವನಂತೆ, ನಡೆಯುತ್ತಿದ್ದ. ''ದಡ್ಡ, ಸೋಮಾರಿ, ಕೆಲಸಗಳ್ಳ, ಅಯೋಗ್ಯ'' ಎಂದು ಚೆನ್ನಾಗಿ ಬಾರಿಸಿದರು. ಹುಡುಗ ತುಟಿ ಬಿಡಿಸಲಿಲ್ಲ.

ಹಾಗೆಂದು ಶಾಲೆಯಲ್ಲಿ ಕಲಿಯುವುದರಲ್ಲೇನು ದಡ್ಡನಾಗಿರಲಿಲ್ಲ. ಉಳಿದ ಹುಡುಗರಿಗಿಂತಲೂ ಕೆಲವುಮಟ್ಟಿಗೆ ಬುದ್ಧಿವಂತ ಅನ್ನಿಸಿಕೊಂಡಿ

ದ್ದನು. ಆದರೆ ಯಾವದಿನ, ಯಾವುದೋ ಹೇಳಲಾರದ ಪ್ರೇರಣೆಯಿಂದ ತಟಕ್ಕನೆ ಮನೆಯಿಂದಲೋ ಶಾಲೆಯಿಂದಲೂ ತಪ್ಪಿಸಿ ದನಗಳೊಡನೆ ತಿರುಗುವನೆಂದು ಹೇಳಲಾಗುತ್ತಿರಲಿಲ್ಲ. ಹೊಸ ತಂದೆತಾಯಿ ಅತಿ ಪ್ರೀತಿಯಿಂದ ಸಾಕುತ್ತಿದ್ದರು. ಆದರೆ ಹುಡುಗ ಆಗಾಗ್ಯೆ ಮನೆಬಿಟ್ಟು ಓಡಿದಾಗಲೆಲ್ಲಾ ಅವರ ಕರುಳು ಚುಚ್ಚಿದಂತಾಗಿ, ತಮ್ಮ ಕೈಗೆ ಬಂದ ತುತ್ತು ಬಾಯಿಗೆ ಬರದೇ ಹೋಗುವುದೋ ಎಂಬ ಭಯ ಅವರನ್ನು ಚೇಳಿನಂತೆ ಕಡಿದು, ಹುಡುಗನನ್ನು ಕೃತಘ್ನನೆಂದು ಭಾವಿಸಿ "ನಿನ್ನನ್ನು ಪ್ರೀತಿಯಿಂದ ಜೀವ ಎರೆದು ಸಾಕುವವರನ್ನು ಮರೆತೆಯಾ?" ಎಂದು ಬೈದು ಸಿಟ್ಟಿನಿಂದ ಹೊಡೆದು ಶಿಕ್ಷಿಸುತ್ತಿದ್ದರು. ಹುಡುಗ ಮಾತನಾಡುತ್ತಿರಲಿಲ್ಲ. ಅವನ ಕಣ್ಣುಗಳಲ್ಲಿ ಮಾತ್ರ—ದೂರವಾದ, ಸ್ಥಿರವಾದ ನೋಟ, ಹಸಿವು, ವ್ಯಥೆ ಕಾಣಿಸಿಕೊಳ್ಳುತ್ತಿದ್ದುವು. ಅವನು ಮಾತನಾಡುವುದೇ ಕಡಿಮೆಯಾಗುತ್ತಿತ್ತು.

ಒಮ್ಮೊಮ್ಮೆ ಫಕ್ಕನೇ ನಾಲ್ಕೂ ಸುತ್ತಲೂ ನೋಡಿ, ಭಯವಾದಂತೆ ನಡುಗುತ್ತಿದ್ದ. ಒಂದು ಕ್ಷಣಕ್ಕೆ ತಾನು ಎಲ್ಲಿ ಇದ್ದೇನೆಂದು ತಿಳಿಯದವನಂತೆ, ಕಣ್ಣುಕಾಣದ ಕಾಡಿನಲ್ಲಿ ಒಂಟಿಯಾಗಿದ್ದವನಂತೆ ಅವನ ಮುಖದಲ್ಲಿ ಭಯದ ಮೋಡ ಕಟ್ಟುತ್ತಿತ್ತು. ಎಷ್ಟೋಬಾರಿ, ರಾತ್ರಿ ಸ್ವಪ್ನದಲ್ಲಿ ದನಕರುಗಳನ್ನು ಕೂಗುತ್ತಿದ್ದ: "ಕೆಂಪೀ, ಬೆಳ್ಳೀ...." ಎಂದು. ದಿನವಿಡೀ ಹುಡುಗ ದನವಿನ ಹಟ್ಟಿಯಲ್ಲೇ ಇರುವುದನ್ನು ಕಂಡು, ತಂದೆತಾಯಿ ಇಬ್ಬರಿಗೂ ಮನಸ್ಸಿನಲ್ಲಿ ಭಯವಾಯಿತು. "ಹಟ್ಟಿಗೆ ಕಾಲಿಡಬಾರದು" ಎಂದು ಕಟ್ಟಪ್ಪಣೆಯಾಯಿತು. ಆ ಹಿಂದಿನ ಬಾಳನ್ನು ಮರೆಯಿಸಬೇಕು. ವಿದ್ಯೆ ಕಲಿಸಿ, ಕಾಲೇಜುವರೆಗೂ ಕಳಿಸಿ, ತಮ್ಮ ಜಾತಿಗೇ ಕೀರ್ತಿತರಿಸಬೇಕು ಎಂದು ಅವರ ಆಶೆ. ಬಿಲ್ಲವರ ಜಾತಿಯಲ್ಲಿ ಆ ಕಾಲದಲ್ಲಿ ವಿದ್ಯಾವಂತರು ಅಂದರೆ ಇಲ್ಲವೇ ಇಲ್ಲ ಅನ್ನಬಹುದಾಗಿತ್ತು. ಈ ಹುಡುಗನನ್ನು ಮೇಲೆ ಕಳಿಸಿ ವಿದ್ಯಾವಂತನನ್ನಾಗಿ ಮಾಡಿ, ಊರಿಗೇ, ಜಾತಿಗೇ ಒಂದು ಕಲಶ ವಿಟ್ಟಂತೆ ಮಾಡಬೇಕೆಂದು ಆಶೆ ಇಟ್ಟುಕೊಂಡಿದ್ದರೆ, ಈ ಹುಡುಗನೋ ಜೀವನದಲ್ಲೇ ಏನೂ ಅಭಿಲಾಷೆಯಿಲ್ಲದವನಂತೆ, ಕನಸಿನಲ್ಲಿ ಬದುಕುತ್ತಿರುವವನ ಹಾಗೆ, ಸ್ವಪ್ನದಲ್ಲಿ ನಡೆಯುವವನಂತೆ, ಇರುತ್ತಿದ್ದರೆ ತಂದೆತಾಯಿಯ ಹೊಟ್ಟೆಯಲ್ಲಿ ಮೆಣಸು ಅರೆದಂತಾಗುವುದಿಲ್ಲವೇ?

ಆದರೂ, ಎಷ್ಟೇ ಸಿರಿಚ್ಚೆ, ಅರ್ಧಸ್ವಪ್ನಾವಸ್ಥೆಯಿದ್ದರೂ, ದೇವರು ಕೊಟ್ಟ ಮೆದುಳು ಕೈಬಿಡಲಿಲ್ಲ. ಪರೀಕ್ಷೆಗಳಲ್ಲೆಲ್ಲಾ ಪಾಸ್ (ಉತ್ತೀರ್ಣ) ಆಗಿ, ಸರಕಾರೀ ಕೆಲಸವೂ ದೊರಕಿತು. ಆಮೇಲೆ ಮುನಸೀಫನೂ ಆದ.

ಆ ಸಮಯದಲ್ಲೇ ಅವನ ಮದುವೆ ಕೂಡಾ ಆಯಿತು. ಜಾತಿಯಲ್ಲಿ ಅತಿ ಪ್ರತಿಷ್ಠಿತರು, ಸ್ಥಿತಿವಂತರು ಎಂಬವರನ್ನೇ ಹುಡುಕಿ, ನಂಟಸ್ತಿಕೆ ಬೆಳೆಸಿದ್ದರು. ಹುಡುಗಿಯೂ ಲಕ್ಷಣವಾಗಿದ್ದಳು. ತಂದೆ–ತಾಯಿ ಹೆಮ್ಮೆ ಪಟ್ಟುಕೊಂಡು, ಹಾಲು ಕುಡಿದರು ಹೊಟ್ಟೆ ತುಂಬಾ. ''ಈ ಹೆರವರ ಹುಡುಗನನ್ನು ತಮ್ಮ ಮಗನನ್ನಾಗಿ ಮಾಡಿದೆವು. ದನಾ ಮೇಯಿಸುವವರ ಹುಡುಗನನ್ನು ಮುನಸೀಫನನ್ನಾಗಿ ಮಾಡಿದೆವು. ಯಾವ ಜಾತಿಯದೋ ಬೀಜವನ್ನು ನಮ್ಮ ಜಾತಿಯ ಅಶ್ವತ್ಥದ ಮರವಾಗಿ ಮಾಡಿದೆವು. ಹಾದಿಯಲ್ಲಿ ಬಿದ್ದಿದ್ದ ಕಲ್ಲುಹರಳು, ಊರಿನ ಗುಡಿಗೇ ಕಲಶವಾಯಿತು. ಯಾರ ರಕ್ತದವನನ್ನೋ ನಮ್ಮ ಕರುಳಾಗಿ ಮಾಡಿದೆವು ಎಂದು ಹಿಗ್ಗಿದರು.

\+ \+ \+ \+ \+ \+

ಆತ ಪೇಟೆಗೆ ಬಂದು ನೆಲಸಿ, ಬಂಗಲೆ ಕ್ರಯಕ್ಕೆ ಪಡಕೊಂಡು, ತನ್ನದೇ ಸಂಸಾರ ಹೂಡಿದ ಮೇಲೆ ತಂದೆತಾಯಿಗಳು: ''ಸರಿ! ದೇವರು ನಮ್ಮ ಕೆಲಸವನ್ನು ಮೆಚ್ಚಿದ; ಅಸ್ತು ಅಂದ ಮಂಗಲವಾಯಿತು. ಇನ್ನು ಅವನದೇ ಸಂಸಾರ, ಅವನನ್ನು ಜೋಕೆಯಿಂದ ಇಟ್ಟುಕೊಳ್ಳುತ್ತದೆ. ಸಂಸಾರ, ಮನೆ,—ಮಕ್ಕಳ, ಬಂಧನವನ್ನು ಹೇಗೆ ಕಡಿದುಕೊಂಡು ಓಡಿ ಹೋಗುತ್ತಾನೆ ಇನ್ನು?'' ಎಂದು ಎದೆ ತಟ್ಟಿಕೊಂಡರು. ಅಂದ ಹಾಗೆಯೇ ಅವನ ಮನಸ್ಸಿನಲ್ಲೂ ಮನೆಯ ಮೇಲೆ ಮಮತೆ ಮೂಡಿದ ಹಾಗೆ ಇತ್ತು. ತಾನಾಗಿ ಮನೆ ತುಂಬಿ, ಸಂಸಾರ ಕೂಡಿಕೊಂಡ ಕೂಡಲೇ, ಎಂಟು-ಹತ್ತು ಒಳ್ಳೇ ಜಾತಿಯ ದನಗಳನ್ನು ತಂದು ಹಟ್ಟಿ ತುಂಬಿಸಿದ. ನಿತ್ಯವೂ ದನವಿನ ಹಟ್ಟಿಗೆ ಹೋಗಿ ಎಷ್ಟೋ ಹೊತ್ತು ಅಲ್ಲೇ ಇರುವುದೊಂದು, ಅಭ್ಯಾಸವಾಗಿ ಹೋಯಿತು. ಆ ಹಟ್ಟಿಯಲ್ಲಿ, ದನಗಳ ಪೈದಡವಿ, ಹಣೆ ತಿಕ್ಕಿ, ಕತ್ತು ನೀವಿದಂತೆಲ್ಲಾ,—ತನ್ನದೇ ಆದ ಆ ಹಿಂದಿನ ಜೀವನದ ರುಚಿ, ಅದರ ಸೌರಂಭ (ಪರಿಮಳ), ಏನೋ ಕನಸಿನಲ್ಲಿ ಪುನಃ ಕಂಡಂತೆ, ಪೂರ್ವಜನ್ಮದ ಸ್ಮೃತಿ ಮನಸಿನ ಕದತಟ್ಟಿದಂತೆ, ಮರುಕಳಿಸುತ್ತಿತ್ತು.

ಒಂದಷ್ಟು ದಿನ ಸುಖವಾಗಿ ಕಳೆದುಹೋದುವು. ಮನೆ, ಉದ್ಯೋಗ, ತನ್ನ ಹೆಂಡತಿ, ಇವುಗಳಿಂದೆಲ್ಲಾ ಒಂದು ವಿಧದಲ್ಲಿ ನಿರ್ಲಿಪ್ತನಾಗಿದ್ದವನಂತೆ, ಕಂಡೂಕಾಣದವನಂತೆ, ನಿದ್ರೆಯಲ್ಲೇ ನಡೆಯುವವನಂತೆ ಇದ್ದ. ಅವನ ಆಳವಾದ ಆನಂದದ, ತನ್ನದೇ ತನ್ನದಾದ ಜೀವನ, ಆ ದನಗಳ ಹಟ್ಟಿಯಲ್ಲಿ ಸಾಗುತ್ತಿತ್ತು. ಆ ದನಗಳ ಮೈಯವಾಸನೆ, ಅವನ ಹುಡುಗತನದ ಜೀವನ, ಬಯಲಿಂದ ಬಯಲಿಗೆ, ಬೆಟ್ಟದಿಂದ ಬೆಟ್ಟಕ್ಕೆ. ಆಕಳುಗಳ ಮಹಾ ಪರಿವಾರದೊಡನೆ ಅಲೆಯುವ ಆ ವಿಚಿತ್ರ ಸುಖವನ್ನು ಜೀವಕ್ಕೆ ಮರಳಿ ತರಿಸುತ್ತಿತ್ತು.

ಆದರೆ, ಮನುಷ್ಯನ ಒಳಗಿನ ಜೀವನ ಹೊರಗಿನಿಂದ ಯಾರಿಗೂ ತಿಳಿಯುವುದು ಕಷ್ಟ. ಅವನ ಹೆಂಡತಿಗೆಯೇ ತಿಳಿಯದೆ ಹೋಯಿತು. ಹೆಂಗಸರು ತಮ್ಮ ಗಂಡಂದಿರಲ್ಲಿ ಏನಾದರೂ ವಿರಕ್ತಿಯನ್ನೋ ಅರುಚಿಯನ್ನೋ ಕಂಡರೆ, ಇಲ್ಲವೇ ಭಾವಿಸಿದರೆ, ತತ್ ಕ್ಷಣ ಅವರ ಕಣ್ಣೆದುರಿಗೆ ಇನ್ನಾರೋ ಒಬ್ಬ ಮಾಟಗಾತಿಯ ಮಾಯಾವಿನಿಯ ರೂಪು ಬಂದು ನಿಲ್ಲುತ್ತದೆ. ಕರ್ಮಧರ್ಮಸಂಯೋಗದಿಂದ, ಮುನಸೀಫರ ಹೆಂಡತಿ ಸಂಶಯಪಡುತ್ತಾ "ಮಾಟಗಾತಿ" ಯನ್ನು ಸಂಶೋಧಿಸುತ್ತಾ ಹುಡುಕುತ್ತಾ ಇರೋ ಕಾಲಕ್ಕೇನೇ ಮನೆಯಲ್ಲಿ ದನಗಳ ಚಾಕರಿಗಾಗಿ "ಬೆಳ್ಳಿ" ಎಂಬ ಕೆಲಸದ ಹೆಣ್ಣು ಇದ್ದುಬಿಟ್ಟಳು. ಹುಡುಗಿಯೂ ಸಾಕಷ್ಟು ಸ್ಫುರದ್ರೂಪಿ. ಪಾಪ! ಅವಳದೇನೂ ತಪ್ಪಿನ ನೆರಳೂ ಇಲ್ಲದೇ ಹೋದರೂ, ಸಂಶಯದ ಅರಸಿನ ಮಂಡಿಗೇ ರೋಗ ತಾಕಿದ ಕಣ್ಣಿಗೆ, ಸಹಜವಾಗಿ ಇರುವುದೂ ಕೂಡಾ "ಚೇಷ್ಟೆ, ಮಾಯಾವಿಯ ಮಾಟ, ಮಾಟಗಾತಿಯ ಕುಹಕ" ಎಂದು ತೋರಿತು. ಸರಿ; ಹೆಂಡತಿ, ತನ್ನ ಸಂಶಯದ ತರ್ಕದ ಗೋಪುರ ಕಟ್ಟಿ, ಆ ಹುಡುಗಿಯನ್ನು ಅಪರಾಧಿನಿಯನ್ನಾಗಿ ನಿಲ್ಲಿಸಿ, ಅವಳನ್ನು ಉಚ್ಚಾಟನೆ ಮಾಡಿಸಿಬಿಟ್ಟಳು. ಅದರೊಡನೆಯೇ ಗಂಡನಿಗೂ ಧಾರಾಳವಾಗಿ ಸಹಸ್ರನಾಮ, ಧರ್ಮೋಪದೇಶಗಳಾದುವು.

ಅವನ ಸುಖದ ಸ್ವಪ್ನ ಒಮ್ಮೆಲೇ ಮುರಿದು ಹೋಯಿತು. ಅಂದಿನಿಂದ ಆತನ ಮನಸ್ಸು ಇನ್ನೂ ಎಲ್ಲೋ ದೂರದ ಘಟ್ಟದ ಮೇಲಿನ ಸೀಮೆ

ಯಲ್ಲೇ ಅಜ್ಞಾತವಾಸಮಾಡತೊಡಗಿತು. ತನ್ನ ಹೆಂಡತಿ, ತನ್ನನ್ನು ಪ್ರೀತಿಸಿ, ತನ್ನ ಮನೆಯ ಲಕ್ಷ್ಮಿಯಾಗಿ, ತನ್ನ ಮಕ್ಕಳ ತಾಯಿಯಾಗು ವಾಕೆ, ತಾನು ಕನಸಿನಲ್ಲೂ ನೆನಸದ ಅಪರಾಧವನ್ನು ತಲೆಯಮೇಲೆ ಹೊರಿಸಿದ ಮೇಲೆ, ಈ ಜೀವನ, ಈ ಹೊರಗಿನ ಜೀವನ ಮತ್ತು ತನ್ನದೇ ಆದ ಒಳಗಿನ ಬಾಳು ಭೂಮಿ—ಆಕಾಶಗಳಷ್ಟು ದೂರ ಇವೆಯೆಂದೂ, ಈ ಎರಡು ಜೀವನಗಳು:—ನಡುಹಗಲಿನ ಮುನಸೀಫನ ಹೊರಜೀವನ, ಮತ್ತು ದನವಿನ ಹಟ್ಟಿಯೊಳಗಿನ ಆ ಸ್ವಪ್ನ ಜೀವನ, ಪೂರ್ವಜನ್ಮದ ಜೀವನ—ಇವೆರಡರಲ್ಲಿ ಸಾಮರಸ್ಯ ಸಾಧ್ಯವಿಲ್ಲವೆಂದೂ ಮನದಟ್ಟಾಯಿತು. ನಡುಹಗಲ ಸೂರ್ಯನ ಬಿಸಿಲು ಮತ್ತು ರಾತ್ರಿಯ ಬೆಳದಿಂಗಳು ಒಟ್ಟಿಗೇ, ಮಗ್ಗಲು ಮಗ್ಗಲಲ್ಲೇ ಇರುವುದು ಸಾಧ್ಯವೇ?

ಈ ಘಟನೆ ನಡೆದ ಕೆಲವು ದಿನಗಳಲ್ಲೇ ಆತ ಹಂಗಾಮಿ ಜಡ್ಜಿ ಆಗಿ, ಆ ರಾದ್ಧಾಂತ ನಡೆದು, ಕೆಲಸಕ್ಕೆ ರಾಜೀನಾಮೆ ಕೊಟ್ಟುದು. ಅವನ ವಿರಕ್ತಿ ಬೆಳೆಯುತ್ತ ಬಂತು. ಮಕ್ಕಳೂ ಆಗಿರಲಿಲ್ಲ. ಈತನ ಮನಸ್ಸು ತಿರುಗಿದಂತೆಲ್ಲಾ, ಹೆಂಡತಿಯ ಸಂಶಯವೂ ಬೆಳೆದು ಪರ್ವತಾಕಾರ ಹೊಂದುತ್ತಿತ್ತು. "ಅಯ್ಯೋ, ಆ ಕೆಲಸದ ತೊತ್ತನ್ನ, ಆ ಬೆಳ್ಳಿಯನ್ನ ಓಡಿಸಿದ ಮಾತ್ರಕ್ಕೇ, ಇಷ್ಟೆಲ್ಲಾ ದುಃಖವಾಯಿತೇ? ಇಷ್ಟೆಲ್ಲಾ ವೈರಾಗ್ಯವೇ? ಆ ಕೆಲಸದ ರಂಡೆ ನನಗಿಂತ ಹೆಚ್ಚಾದಳೇ? ಆ ಮನೆ ಆಳಿಗಾಗಿ ಎದೆಯೊಡೆದು ವ್ಯಥೆಪಡಬೇಕೇ?"

ಕೆಲವು ತಿಂಗಳಲ್ಲಿ ಆತ ಕಾಯಿಲೆ ಬಿದ್ದ. ಆದರೂ ಕಾಯಿಲೆಯಿಂದ ಆತನಿಗೆ ಕ್ಷೋಭೆಯಾಗಲೀ, ಕಾತರತೆಯಾಗಲೀ ಉಂಟಾದಂತೆ ತೋರಲಿಲ್ಲ. ಹೆಂಡತಿಯ ಮನಸ್ಸು ಇನ್ನೂ ಕಲ್ಲಾಯಿತು. ಆ ಹಾಳು ಹೆಣ್ಣಿಗಾಗಿ ಕೊರಗುತ್ತಿದ್ದಾನೆ, ಅಂದುಕೊಂಡಳು. ಆದರೂ, ಒಮ್ಮೊಮ್ಮೆ ತಪ್ಪು ಭಾವಿಸಿದನೋ, ಅನ್ಯಾಯವಾಗಿ ಏನೇನೋ ತಿಳಿದುಕೊಂಡೆನೋ ಎಂದು ಸಂದೇಹ. ಅವನ ಸೌಮ್ಯವೃತ್ತಿ, ದೊಡ್ಡ ಮನಸ್ಸು, ಸಜ್ಜನತೆಗಳಿಂದ "ದೇವರು ಮನುಷ್ಯ" ಎಂದು ನಾಲ್ಕು ಜನ ಹೇಳುತ್ತಿದ್ದರು. ಅವನ ಬಾಯಿಯಿಂದ ಒಂದು ಸಿಡುಕಿನ ಮಾತು, ಒಂದು ಕೆಟ್ಟ ಶಬ್ದ ಬಂದುದು ಅವಳ

ನೆನಪಿನಲ್ಲೂ ಇರಲಿಲ್ಲ. ಆದರೆ ಏನೋ ಪರದೇಶದಲ್ಲಿ ಇರುವವನಂತೆ, ಕಣ್ಣುಕಟ್ಟಿ ಕಾಡಿನಲ್ಲಿ ಬಿಡಲ್ಪಟ್ಟವನಂತೆ, ನಾಲ್ಕೂ ಸುತ್ತೂ ಯಾರೂ ಗುರುತಿನವರೇ ಇಲ್ಲದಂತೆ ಇದುವುದಾದರೂ ಏಕೋ ಹೆಂಡತಿಗೆ ಗಂಡನ ಆಳ ಗೊತ್ತಾಗಿರಲಿಲ್ಲ. ಗಂಡನ ಮನಸ್ಸಿನ ಒಂದೇ ಒಂದು ಸಣ್ಣ ವಿಚಾರ ವಾಗಲೀ, ಹೃದಯದ ಒಂದು ಭಾವನೆಯ ಛಾಯೆಯಾಗಲೀ ಅವಳಿಗೆ ಗೊತ್ತಾಗುತ್ತಿರಲಿಲ್ಲ. ಅವನ ಪ್ರಪಂಚ ಯಾವುದೋ, ಜೀವನ ಯಾವುದೋ? ಅವನಿಗೆ ಹೊಂದಿಕೊಂಡು, ಅವನ ಹೃದಯದ ಭಾಷೆಯನ್ನು ಅರಿಯಬಲ್ಲ ಪ್ರಾಣಿ ಪ್ರಪಂಚದಲ್ಲೇ ಇದೆಯೇ? ಹೆಂಡತಿಯ ಸಂಶಯ ಗಂಡನು ಸಾಯುವಕಾಲದವರೆಗೂ ಅಳಿದುಹೋಗಲಿಲ್ಲ.

ಕಾಯಿಲೆ ವಿಶೇಷವಾಗಿತ್ತು. ಜೀವಕ್ಕೆ ಅಪಾಯವುಂಟೆಂದೂ ತಿಳಿ ಯಿತು. ಒಂದು ದಿನ ಜ್ವರದಲ್ಲಿ ಮಲಗಿಕೊಂಡಿದ್ದ. ಡಾಕ್ಟರರು ನಾಡಿ ನೋಡಿ, ಜ್ವರ ಕಂಡುಹಿಡಿದು ಮುಖ ಕಪ್ಪುಮಾಡಿಕೊಂಡಿದ್ದರು. ಆದರೆ ಮುಮೂರ್ಷುವಿನ ಮುಖದಲ್ಲಿ ಭಯವಿರಲಿಲ್ಲ. ವಿಕಲತೆ, ವಿಹ್ವಲತೆ ಇರ ಲಿಲ್ಲ. ಸ್ವಪ್ನದ ಶಾಂತಿ, ಕನಸಿನ ಸಂತೋಷ ಇದ್ದುವು. ಆ ಕಾಲಕ್ಕೆ ಬಸವ ಘಟ್ಟದ ಮೇಲೆ ತನ್ನ "ಚಿಕ್ಕ ದೇವರ ವಾಕ್ಯ" ದಲ್ಲಿದ್ದ. ಒಂದು ಲಂಗೋಟಿ, ಮೈಮೇಲಿಡೀ ದೊರಗಾದ ಕಂಬಳಿ; ತಲೆಯ ಮೇಲೆ ಕಂಬಳಿಯ ಮುಂಡಾಸು. ಎದುರಿಗೇ ಅಪ್ಪ; ಮೈತುಂಬ ಕಂಬಳಿ; ಬೆಟ್ಟಗಾತ್ರದ ಮುಂಡಾಸು. ಆಚೆ ಈಚೆಗೆ ನಾಲ್ಕು ಮಂದಿ ಕೌಪೀನ—ಮುಂಡಾಸುಧಾರಿ ಗಳಾದ ಅಣ್ಣತಮ್ಮಂದಿರು. "ಅಂಭೇ" ಎಂದು ಗುಟುರೇ ಹಾಕುತ್ತಿರುವ ದೊಡ್ಡ ದೊಡ್ಡ ದನಗಳು. ಸೊಕ್ಕುತ್ತಾ, ನೆಗೆಯುತ್ತಾ, ಓಡುತ್ತಾ, ಹಾರುತ್ತಾ ಕಿವಿಯೊಳಗೆ ಗಾಳಿ ಹೊಕ್ಕಂತೆಲ್ಲಾ ಹುಚ್ಚುಗಟ್ಟಿ ಕುಣಿಯುತ್ತಿದ್ದ ಹುಚ್ಚುಚ್ಚು ಎಳೆಗರುಗಳು ಹಿಂದಿನಿಂದ ತಾಯಿ: " ಲೋ, ಬಸವಾ " ಎಂದು ಕೂಗು ತ್ತಿದ್ದಾಳೆ.

ಅದೇ ಹೊತ್ತಿಗೆ ವಕೀಲರು ಉಯಿಲನ್ನು (Will, ಮೃತ್ಯು ಪತ್ರ) ತಂದರು. ಸುಂದರಪ್ಪನವರಿಗೆ ಮಕ್ಕಳಿಲ್ಲವಾದ್ದರಿಂದ, ಉಯಿಲಿನ ಮೂಲಕ ಹೆಂಡತಿಗೆ ಆಸ್ತಿಯನ್ನು ಬಿಡದೇಹೋದರೆ, ಆಸ್ತಿಯೆಲ್ಲಾ ಯಾರ್ಯಾರೋ

ಸಂಬಂಧಿಕರ ಬಾಯಿಗೆ ಬೀಳುತ್ತದೆ. ಅದಕ್ಕಾಗಿ ಹೆಂಡತಿಯ ಹೆಸರಿಗೇ ಆಸ್ತಿಯನ್ನು ಬರೆಯಿಸಬೇಕೆಂದು, ಮುಂಚೆಯೇ ಅವರೇ ವಕೀಲರನ್ನು ಕರೆಯಿಸಿದ್ದರು. ಮೃತ್ಯು ಪತ್ರ (ಉಯಿಲು) ಸಿದ್ಧವಾಗಿತ್ತು. ವಕೀಲರು ಬಗ್ಗಿ, "ರುಜು ಮಾಡುತ್ತೀರೋ?" ಎಂದು ಕೇಳಿದರು. ಹೆಂಡತಿ ನಿಶ್ಶಬ್ದ ವಾಗಿ ಕಣ್ಣೀರು ಸುರಿಸುತ್ತ ಅಳುತ್ತಿದ್ದಳು.

ಬಸವ ಜ್ವರದ ಸ್ವಪ್ನದಲ್ಲೇ, ಘಟ್ಟದ ಮೇಲಿನ ಆ ಹುಲ್ಲುಗಾವಲಲ್ಲೇ, ಚಿಕ್ಕದೇವರ ಪಾಳ್ಯದಲ್ಲೇ ನಿಂತುಕೊಂಡು ರುಜು ಹಾಕಿದ.

ಅದೋ ... ... ಆ ಆಕಳುಗಳ ಗುಂಪು. ಕೆಂಸಿದನಕ್ಕೆ ತುಂಬಿದ ಗಬ್ಬ. ನಿಧಾನವಾಗಿ ಗಂಭೀರವಾಗಿ ಮಹಾರಾಣಿಯ ಹಾಗೆ, ಹುಲ್ಲಿನ ಪಚ್ಚೆ ರತ್ನಗಂಬಳಿ ಮೆಟ್ಟುತ್ತಾ, ಹುಲ್ಲುಮೇಯುತ್ತಾ ಇದೆ .......ಅದೋ ಆ ಪಕ್ಕದಲ್ಲಿ ಎರಡು ಕರುಗಳು ಚೇಷ್ಟೆಗಾಗಿ ದ್ವಂದ್ವ ಯುದ್ಧವಾಡುತ್ತಿವೆ........ ಆ ಬೆಳ್ಳಿ ದನ ಕಾಣುವುದಿಲ್ಲವಲ್ಲಾ — ಓ ಅಲ್ಲಿಲ್ಲವೇ? ಅಲ್ಲ ಅದು ಕಪಿಲೆ. ಅರೆ! ಬೆಳ್ಳಿ ಎಲ್ಲಿದೆ?........ಓ ಅಲ್ಲಿ ಕೆಂಪಿಯೊಡನೆ—ಓ! ಅದು ನಂದಿ........ ಬೆಳ್ಳಿ ಎಲ್ಲಿ ತಪ್ಪಿಸಿ ಹೋಯಿತಪ್ಪಾ! ಮಹಾ ತುಂಟದನ ......."ಬೆಳ್ಳೀ—ಓ ಬೆಳ್ಳೀ .......ಕೂ........"

ಎರಡು ನಿಮಿಷದಲ್ಲೇ ಮುನಸೀಫ ಸುಂದರಪ್ಪನವರು ದಿವಂಗತ ರಾದರು. ಮರಣಕಾಲದಲ್ಲಿ, ತಲೆಬುಡದಲ್ಲಿಯೇ ಕುಳಿತು ಶ್ರದ್ಧೆಯಿಂದ ಸೇವೆಮಾಡುತ್ತಿದ್ದ ಹೆಂಡತಿಗೆ "ಬೆಳ್ಳಿ" ಯನ್ನು ಕರೆಯುವುದು ಕೇಳಿಸಿತು. ಆ ಕ್ಷಣಕ್ಕೇ ಹೆಂಗಸಿನ ತುಟಿ ಕಚ್ಚಿತು. ಎದೆ ಕಲ್ಲಾಯಿತು. "ಸಾಯೋ ಕಾಲಕ್ಕೂ, ಹಾದರಗಿತ್ತಿ ತೊತ್ತಿನ ನಾಮಸ್ಮರಣೆ ಮಾಡುತ್ತಾ ವೈಕುಂಠಕ್ಕೆ ಹೋದ" ಎಂದುಕೊಂಡಳು. ಅವಳ ಮನಸ್ಸಿನಲ್ಲಿ ಮಿಣುಕುತ್ತಿದ್ದ, ಮಿಣಿ-ಮಿಣಿಯೆಂದು ಉರಿಯುತ್ತಿದ್ದ ಪ್ರೀತಿಯ ಹಣತೆ ನಂದಿಹೋಯಿತು. ಹೊಗೆ ಕವಿದುಕೊಂಡಿತು.

ಮರುದಿನ, ದಿವಂಗತರ ಹೆಂಡತಿ, ಹೆಂಡತಿಯ ತಂದೆ—ತಾಯಿಗಳ ಸಮಕ್ಷಮ ಉಯಿಲು ಓದಲ್ಪಟ್ಟಿತು. ಅದನ್ನು ನೋಡಿದಾಗ ಹೆಂಡತಿಯ ಎದೆ ಧಸಕ್ಕೆಂದಿತು. ಅದರ ರುಜು "ಬಸವ" ಎಂದು ಕನ್ನಡದಲ್ಲಿದ್ದಿತು.

ವಕೀಲರು ಸಪ್ಪೆಮೋರೆ ಹಾಕಿ,: "ಇದರ ಅರ್ಥವೇನಮ್ಮ? ಈ ಉಯಿಲಿಗೆ ಏನೂ ಬೆಲೆಯಿಲ್ಲವಲ್ಲಾ ......"

ಹೆಂಡತಿಯ ಮುಖದಲ್ಲಿ ಪಾಷಾಣದಂಥ ಹಗೆ, ತಿರಸ್ಕಾರ ಮೂಡಿದುವು. "ಆತನಿಗೆ ನನ್ನ ಮೇಲೆ ಇಷ್ಟು ವೈರವೇ? ಒಳ್ಳೇ ಹಗೆ ಸಾಧಿಸಿದ. ನಿನ್ನ ಕಾಮುಕ್ಕೆ ಅಡ್ಡಬಂದುದಕ್ಕೆ ಒಳ್ಳೇ ಸೇಡು ತೀರಿಸಿದೆ" ಎಂದುಕೊಂಡು ಒಳಗೆ ಹೋಗಿ ತನ್ನ ಮತ್ತು ಆತನ ಮದುವೇ ಕಾಲದ ಪಟವನ್ನು ತೆಗೆದು ಬೆಂಕಿಗೆ ಒಗೆದಳು.

---

# ಅವರವರ ಸುಖ ದುಃಖ

ಮನುಷ್ಯ ಹೇಗಿದ್ದಾತ ಹೇಗಾಗಿ ಬಿಡುತ್ತಾನೆ ಎಂಬುದೊಂದು ಅದ್ಭುತ ವಿಷಯ. ದೊಡ್ಡ ಮನಸ್ಸಿನ, ಧಾರಾಳ ಹೃದಯದ ಹುಡುಗ, ಕಾಸಿಗೆ ಕಾಸು ಗಂಟುಹಾಕುವ ಜಿಪುಣನಾಗುವುದನ್ನು ನಾನು ಕಂಡಿದ್ದೇನೆ. ಇರುವೆಯನ್ನೂ ನೋಯಿಸಲಾರದ, ಹೂವಿನಂಥ ಮನಸ್ಸಿನ ಹುಡುಗ, ಪೋಲಿಸ್ ಇನ್ಸ್‌ಪೆಕ್ಟರನಾಗಿ, ಮಹಾಕಾಲಭೈರವ, ಸುಜನಕುಠಾರನಾಗುವುದನ್ನು ಕಂಡಿದ್ದೇನೆ. ಹಾಗೇನೇ, ನಮ್ಮ ಶಂಭುವಿನಲ್ಲಾದ ಮಾರ್ಪಾಡೂ ಕಡಿಮೆಯಲ್ಲ.

ನಾನೂ, ಶಂಭುವೂ ಒಟ್ಟಿಗೆ ಕಲಿತವರಾದ್ದರಿಂದ, ಅವನನ್ನು ಚೆನ್ನಾಗಿ ಬಲ್ಲೆ. 'ಸಣ್ಣ ಕಂಬಳ' ಶಾಲೆಯಲ್ಲಿ ಒಂದೇ ಕ್ಲಾಸಿನಲ್ಲಿ ಕಲಿಯುತ್ತಿದ್ದೆವು. ಮಾತ್ರವಲ್ಲ, ಅವನ ಮನೆಯ ಹತ್ತಿರವೇ ನಮ್ಮ ಮನೆ. ನಾವಿಬ್ಬರೂ ಒಟ್ಟಿಗೆ, ಎರಡೂ ಮನೆಗಳ ಅಂಗಳದಲ್ಲಿ, ಅವನ ಚಿಕ್ಕತಂದೆಯ (ಕಕ್ಕ) ಮಕ್ಕಳೊಂದಿಗೆ ಆಡುತ್ತಿದ್ದುದು ನೆನಪಿದೆ. ಇವನ ತಂದೆಯೂ, ಚಿಕ್ಕ ತಂದೆಯೂ, ಸಾಕಷ್ಟು ಇದ್ದವರೇ. ಒಳ್ಳೇ ಪ್ರತಿಷ್ಠಿತ ಮನೆತನ. ಇವನ ತಂದೆ ಒಳ್ಳೇ ಜಾಗ್ರತೆಯ ಜನ. ಹಣ ಪೋಲು ಮಾಡುವವರಲ್ಲ. ಅದರ ಮೇಲೆ ಶುಕ್ರದೆಸೆ ಅನ್ನಿ. ಸ್ವಲ್ಪ ಹಣಮಾಡಿ ಇಟ್ಟಿದ್ದರು. ಹೊಸ ಆಸ್ತಿ ಕೊಳ್ಳುತ್ತಿದ್ದರು. ಮನೆಯನ್ನು ಹೊಸದಾಗಿ ಕಟ್ಟಿಸುತ್ತಿದ್ದರು.

ಅವನ ಚಿಕ್ಕತಂದೆಯವರ ಸ್ಥಿತಿ ತುಸು ಕೆಳಮುಖವಾಗಿತ್ತು. ಸ್ವಲ್ಪ ಉಪೇಕ್ಷೆಯ, ಸ್ವಲ್ಪ ಧಾರಾಳ ಕೈಯ ಮನುಷ್ಯ. ಅದರ ಮೇಲೆ ಅಷ್ಟಮದಲ್ಲಿ ಅಂಗಾರಕ. ಅವರ ಅವಸ್ಥೆ ಗಂಡಾಂತರಕ್ಕೆ ಇಳಿಯುವ ಹಾಗೆ ತೋರುತ್ತಿತ್ತು.

ಶಂಭುವಿನ ವಿಷಯ ಹೇಳಲಿಲ್ಲ. ಅವನನ್ನು ನಾವೆಲ್ಲಾ, ಕರ್ಣ ಮಹಾರಾಯನೆಂದೋ, ಧರ್ಮರಾಯನೆಂದೋ, ಲೇವಡಿ ಮಾಡುತ್ತಿದ್ದೆವು. ಯಾರ ಕಷ್ಟವನ್ನು ಕಂಡರೂ ಕರಗಿ ಹೋಗುತ್ತಿದ್ದ. ಕಳ್ಳಹುಡುಗರು

ತಮ್ಮ ಪೆನ್ಸಿಲು, ಪುಸ್ತಕ ಕಳೆದು ಹೋಯಿತೆಂದು ಅವನ ಎದುರು ಸುಳ್ಳೇ ನಟಿಸಿ, ಅತ್ತು ಅವನಿಂದ ಪುಸ್ತಕ ಪೆನ್ಸಿಲು ದಾನವಾಗಿ ಪಡೆದು, ಹೋಟೇಲು ಗಣಪತಿ ಕಪ್ಪಿಯಲ್ಲಿ ಮೂರಿ, ಕಾಫಿ, ಕಡಲೆ ಮುಕ್ಕುತ್ತಿದ್ದರು. ನಮ್ಮ ಭೋಳೇ ಶಂಭು, ತನ್ನ ದಾನದ ಪ್ರತಿಫಲವಾಗಿ ಮನೆಯಲ್ಲಿ ಕಿವಿಯಪ್ಪ ತಿನ್ನುತ್ತಿದ್ದ. ಇದೂ ಅಲ್ಲದೆ, ನಾನು ಅಂದರೆ, ಅದಕ್ಕಿಂತಲೂ ಹೆಚ್ಚು, ತನ್ನ ಹತ್ತಿರದ ಸಂಬಂಧಿಕರು, ಅಂದರೆ, ತನ್ನ ತಂದೆ, ತಾಯಿ, ತಂಗಿ-ತಮ್ಮಂದಿರು ಅಂದರೆ ಜೀವ. ಅವನ ಚಿಕ್ಕ ತಂದೆಯ ಇಬ್ಬರು ಮಕ್ಕಳೂ ನಮ್ಮ ಕ್ಲಾಸಿನಲ್ಲೇ ಇದ್ದರು. ಅವರನ್ನು ಈತ ಪರಿಪಾಲಿಸುವ ಕ್ರಮವನ್ನು ನೋಡಿ ಎಲ್ಲರೂ ನಗುತ್ತಿದ್ದರು. ಅವರನ್ನು ಯಾರೂ ಚಾ-ಚೂ-ಅನ್ನ ಲಿಕ್ಕಿಲ್ಲ — ನಮ್ಮ ಶಾಂತಿಮೂರ್ತಿ ಶಂಭು ಕದನಕಲಿ, ಅರಿಭಯಂಕರ ನಾಗುತ್ತಿದ್ದ.

ನಾನು ಹೇಳಿದೆನಲ್ಲಾ. ಅವರ ಚಿಕ್ಕಪ್ಪನ ಸ್ಥಿತಿ ಹದಗೆಡುತ್ತಿತ್ತೆಂದು —ಅದು ವಿಕೋಪಕ್ಕೆ ಬಂತು. ನಾಲ ಏರಿ, ಏರಿ, ಆಸ್ತಿ ಹರಾಜಾಗಿ, ಮನೆಯನ್ನೇ ಮಾರುವಂಥ ಪ್ರಸಂಗ ಬಂತು. ಒಳ್ಳೇ ಮರ್ಯಾದಸ್ಥರು. ನಮ್ಮ ರಾಯರ ಒಡಹುಟ್ಟಿದ ತಮ್ಮಂದಿರೇ ತಾನೆ. ಅಣ್ಣನಲ್ಲಿಗೆ ಬಂದು, ಸ್ಪಷ್ಟವಾಗಿ ಹೇಳಲು, ಬಾಯಿ ಬರದೆ, ರಾಮಾಯಣ ತೋಡಿಕೊಂಡು, ತಾಪತ್ರಯದ ಗೋಳು ಹೊಯ್ದುಕೊಂಡರು. ಅಣ್ಣ 'ರಾಯರು', ಬಹಳ ಸಹಾನುಭೂತಿಯಿಂದ ಕೇಳಿ: "ಛೇ! ಹೌದೇ? ಏನು ಕಷ್ಟವಪ್ಪಾ! ಎಲ್ಲಾ ಆ ಭಗವಂತನ ಆಟ. ನಾವು ನಿಮಿತ್ತಮಾತ್ರರು. ಅವನು ಆಡಿಸಿದ ಹಾಗೆ" ಎಂದು ವೇದಾಂತಮಾಡಿ, ಕಾಫೀ ಕುಡಿಸಿದರು. ಒಳಗೆ ಚಿಕ್ಕಮ್ಮ ನಿಗೆ, ಶಂಭುವಿನ ತಾಯಿ, ಬಹಳ ಕರುಣೆಯಿಂದ ಸಂತೈಸಿ, ಕಣ್ಣೀರು ಸುರಿಸಿ: "ಏನು ತಂಗೀ! ಈ ಸುಖ, ಐಶ್ವರ್ಯ ಎಲ್ಲಾ, ನೆರೆಯ ನೀರಮ್ಮಾ, ಒಂದು ಕ್ಷಣ ಸರ್ರನೆ ಬಂತು; ಮರುಕ್ಷಣ ಇಳಿದುಹೋಯಿತು. ಹಾಗೇ ನೋಡಮ್ಮಾ" ಎಂದು ಬಿಸುಸುಯ್ದರು. ಗಂಟೇ ಗಟ್ಟಲೆ ಪ್ರಸ್ತಾವಿಸಿ, ಬೇಡಿ, ಸೂಚಿಸಿ, ಮನೆ-ಆಸ್ತಿಯನ್ನೆಲ್ಲಾ ಇವರಿಗೇ ಅಡವಾಗಿಸುವ ಪ್ರಸ್ತಾಪ ವನ್ನು ಮಾಡಿಯೂ, ಕೊನೆಗೆ ನಿರಾಶರಾಗಿ ಸಪ್ಪೆಮೋರೆ ಹಾಕಿಕೊಂಡು, ಗಂಡಹೆಂಡಿರು ಹೋದರು.

ರಾಯರು ಗಂಭೀರನಾಗಿ ರುಕ್ಮಿಣಿಯಮ್ಮನ ಹತ್ತಿರ ಅಪ್ಪಣೇ ಕೊಡಿಸಿದರು: "ಅಲ್ಲಾ, ಸಂಬಂಧಿಕರು, ಕುಟುಂಬದವರಿಗೆ ಸಾಲಕೊಟ್ಟರೆ ಹಣವೂ ನಾಮ; ಅಪಕೀರ್ತಿ ಬೇರೆ; ಮತ್ತೆ ಮನೋಕಷಾಯ. ಹಣ ಬಾರದ ಸಂಕಟ, ಹಣ ಕೇಳಲು ದಾಕ್ಷಿಣ್ಯ. ಈ ಉಭಯ ಸಂಕಟವೇ ಬೇಡಪ್ಪಾ! ನಮ್ಮದೇ ನಮಗೆ ಹೊರಲಾರದಷ್ಟು ಭಾರವಾಗಿದೆ" ಎಂದರು, —ಬೇಂಕಿನಲ್ಲಿಟ್ಟ ತಮ್ಮ ಹತ್ತು ಸಾವಿರ ರೂಪಾಯಿನ ಅಸಾಧ್ಯ ಹೊರೆಯನ್ನು, ಪಾಪ; ನೆನೆದು.

ಅಮ್ಮನವರೂ ಸಹಜವಾಗಿಯೇ ದನಿಗೂಡಿಸಿದರು: "ಅಲ್ಲಾಂದ್ರೆ, ಅವರವರ ಸುಖ ದುಃಖ ಅವರವರಿಗೆ. ಯಾರ ಕಷ್ಟಕ್ಕೆ ಯಾರಿದ್ದಾರೆ? ನಾವು ಈ ಸಂಕಟವನ್ನು ಕುತ್ತಿಗೆಯ ಮೇಲೆ ಹಾಕಿಕೊಂಡರೆ, ನಮಗೆ ಕೈ ಕೊಟ್ಟು ಎತ್ತುವವರು ಯಾರಂತೆ? ಕುಟುಂಬಾ, ಸಂಸಾರಾ, ನಮ್ಮವರೂ, ಎಂದು ನೆನಸಿದವ ತಿರುಪೆಗೆ ಹೋದ." ಎಂದು ಜ್ಞಾನಪ್ರದರ್ಶನವಾಯಿತು.

ಆ ಏಳೆಂಟು ದಿನ ನನಗೆ ಚೆನ್ನಾಗಿ ನೆನಪಿವೆ. ಒಂದನೆಯದಾಗಿ, ರಾಯರ ತಮ್ಮ, ದೊಡ್ಡಕುಟುಂಬದವರಾದ್ದರಿಂದ, ಅವರ ಅವನತಿ, ಊರಿಗೆಲ್ಲಾ ದೊಡ್ಡ ಸುದ್ದಿಯೇ. ಎರಡನೆಯದು, ನಮ್ಮ ಶಂಭುವಿನ ರಾದ್ಧಾಂತದಿಂದಾಗಿ. ಅವನಿಗೆ ಆ ಹತ್ತು ಹನ್ನೆರಡು ದಿನ ಸುಖವೇ ಇರಲಿಲ್ಲ. ಗಳಿಗೆಗೊಮ್ಮೆ, ಚಿಕ್ಕಮ್ಮನ ಮನೆಗೆ ಹೋಗಿ, ಅವರೊಡನೆ ಅತ್ತು ಅವರ ಗೋಳು ಕೇಳಿ, ಎದೆ ಕರಗಿ ಬರುತ್ತಿದ್ದ. ಹಾಗೆಂದು, ಚಿಕ್ಕಮ್ಮ ಅವನೆದುರಿಗೆ ಚಕಾರ ಎತ್ತುವಷ್ಟು ಅಭಿಮಾನ ಶೂನ್ಯರಲ್ಲ. ಆದರೆ ಅವನ ತಮ್ಮಂದಿರ ಬಾಡಿದ ಮುಖ, ಸೊರಗಿದ ಹೊಟ್ಟೆ, ಚಿಕ್ಕಪ್ಪನ ಅರ್ಧ ಹುಚ್ಚರಂಥ ಸ್ಥಿತಿಯಿಂದ ಅವನಿಗೆ ಎಲ್ಲಾ ದುಃಖದ ಆಳ ಗೊತ್ತಾಗುತ್ತಿತ್ತು.

ಒಂದು ದಿನ ಒಲೆ ಬುಡದಲ್ಲಿದ್ದ ಅಮ್ಮನ ಬೆನ್ನು ಹಿಡಿದ. "ಅಮ್ಮ" ಅಂದ ಅಮ್ಮ "ಏನೋ? ಒಲೆಯ ಬುಡದಲ್ಲಿ ಆರೂಢ?" ಎಂದರು. 'ಅಮ್ಮ, ಪಾಪ, ಚಿಕ್ಕಮ್ಮನಿಗೆ ಎಷ್ಟು ಕಷ್ಟ? ನೀನೂ, ಅಪ್ಪನೂ ಮನಸ್ಸು ಮಾಡಿದರೆ ...'

"ಈ ಹುಡುಗನ ಅಧಿಕಪ್ರಸಂಗವೇ! .......ಅಲ್ಲ ಮಗು. ನಿನಗೆ ತಿಳಿಯುವುದಿಲ್ಲ. ಹುಡುಗ! ನಮ್ಮ ಕಷ್ಟವೇ ನಮಗೆ ಸಾಕಾಗಿದೆ. ನಿನಗೆ

ಕಲಿಸಬೇಡವೇ? ನಿನ್ನ ಅಪ್ಪ ಆ ಬಾಳೆ ಬೈಲು ಆಸ್ತಿ ಕೊಳ್ಳಬೇಕೆಂದಿದ್ದಾರೆ. ಕೆಳಗಿನ ಹಿತ್ತಲಲ್ಲಿ ಮನೆ ಕಟ್ಟಿಸುವುದಕ್ಕೆ ಎಷ್ಟು ಖರ್ಚು ಗೊತ್ತೇ? ಆ ಮೇಲೆ, ಆ ಮನೆ ರಿಪೇರಿ, ಹಾಗೆ, ಹೀಗೆ, ಅಂದರೆ, ನಿನ್ನ ಅಪ್ಪ ಏನು ರೂಪಾಯಿ ಮರ ನೆಟ್ಟಿದ್ದಾರೆಯೇ? ಮತ್ತೆ, ನೋಡು—ಅವರವರ ಸುಖ ದುಃಖ ಅವರವರಿಗೆ. ನಾವು ಅವರನ್ನು ಹೊರುವುದಾದರೆ, ನಮ್ಮನ್ನು ಹೊರಲಿಕ್ಕೆ ಯಾರು ಬರುತ್ತಾರೆ ಎಂದು ತಿಳಿದಿ ಮಗು?" ಎಂದು ಸವಿಯಾಗಿ ಅಂದರು.

"ಮತ್ತೆ ನೋಡು: ರಮನ ಮದುವೆಯ ಯೋಚನೆ ಮಾಡಬೇಕು. ಕೃಷ್ಣನಿಗೆ ಇದೇ ಎರಡು ತಿಂಗಳಲ್ಲಿ ಸೂಲ ಮದುವೆಯಾಗಬೇಕು. ನಿನಗೆ ಮಂಗಳೂರಿನ ದೊಡ್ಡ ಶಾಲೆಗೆ ಕಳಿಸಬೇಡವೇ? ಕೃಷ್ಣನಿಗೂ, ನಿನ್ನ ಹಿಂದೆಯೇ ಪೇಟೆಗೆ ಕಳಿಸಬೇಕು........ನಮ್ಮ ತಾಪತ್ರಯ ಪರ್ವತವಾಗಿ ನಿಂತಿದೆ."

ಮುಖ ಸಪ್ಪೆಮಾಡಿಕೊಂಡು, ಅಪ್ಪನ ಕಿವಿಯಲ್ಲಿ ಒಂದು ಮಾತು ಹಾಕಿನೋಡಿದ. ಅವರು ಗುಡುಗುಡಿಸಿದರು: "ಅಧಿಕಪ್ರಸಂಗ! ದೊಡ್ಡವರ ಮಾತಿನಲ್ಲಿ ನಿನ್ನೆ ಹುಟ್ಟಿದ ಕೂಸುಗಳು ಬಾಯಿಹಾಕುವುದು! ಅಪ್ಪನಿಗೆ ಉಪದೇಶಮಾಡಲು ಬಂದನಲ್ಲಾ ಮಗರಾಯ... ..ಅಲ್ಲಾ. ನನ್ನ ಬಾಯಿಂದೇನು ರೂಪಾಯಿ ಉದುರುತ್ತದೆಯೇ ಹೇಗೆ? ಅವರವರ ಸುಖ ದುಃಖ ಅವರವರಿಗೆ, ಈ ಹೊರೆ ಹೊತ್ತೇ ನನ್ನ ಬೆನ್ನು ಮುರಿಯಿತು. ಇನ್ನು ಇನ್ನೊಬ್ಬರ ಸಂಸಾರದ ತಾಪತ್ರಯ ಹೊರಬೇಕೆ? ಚಂದದ ಮಾತು! ಮಕ್ಕಳಿಗೇನು ಗೊತ್ತು ತಲೆ-ಬಾಲ" ಎಂದು.

ಹುಡುಗ ತುಂಬಾ ರಂಬಾಟಮಾಡಿದ. ಊಟಮಾಡಲಿಲ್ಲ. ಅನ ಸತ್ಯಾಗ್ರಹ ಹೂಡಿದ. 'ಅಕ್ಕಿ ಉಳಿಯಿತು' ಎಂದರು ತಂದೆ. ಅಮ್ಮ, "ಹಸಿವಾದಾಗ, ನಾಯಿಯ ಹಾಗೆ ಬಂದು ಮುಕ್ಕುತ್ತಾನೆ" ಎಂದರು. "ಅಲ್ಲಾ ಹುಡುಗರ ಸೊಕ್ಕೆ! ಅದರ ಮೇಲೆ ಒಂದಿಷ್ಟಾದರೂ ಮೆದಳು ಬೇಡವೇ? ಅವರವರ ಸುಖ ದುಃಖ ಅವರವರಿಗೆಂದೂ ತಲೆಗೆ ಹೊಳಯುದಿದ್ದರೆ!" ಕೊನೆಗೂ, ಶಂಭು, ಹಸಿದ ನಾಯಿಯಂತೆ, ಊಟಕ್ಕೆ ಬಂದ ಎನ್ನಿ. ಹುಡುಗ ಬೇರೇನುಮಾಡಿಯಾನು? ಆದರೆ ಶಾಲೆಯಲ್ಲಿ ತನ್ನ ಚಿಕ್ಕಪ್ಪನ

ಮಕ್ಕಳಿಂದ, ನಾಚಿಕೆಯಿಂದ, ಆತ್ಮಲಾಂಛನದಿಂದ ಮುಖಮುಚ್ಚಿಕೊಳ್ಳು ತ್ತಿದ್ದ. ನನ್ನೊಡನೆ ಬಹಳವಾಗಿ ಗೋಗರೆದ: 'ಅಪ್ಪ, ಅಮ್ಮ ಸುಮ್ಮನೆ ಆಸೆ ಮಾಡುತ್ತಿದ್ದಾರೆ' ಎಂದ. "ಆ ಕೆಳಗಿನ ಹೊಸಮನೆ ಕಟ್ಟದೇ ಹೋದರೆ, ಏನು ಮಹಾ ಸ್ವರ್ಗಲೋಕ ತಪ್ಪುತ್ತದೆ?" ಎಂದ, "ಆ ಹಾಳು ಬಾಳೆ ಬೈಲು ಆಸ್ತಿಯ ಬದಲು ಚಿಕ್ಕಪ್ಪನ ಆಸ್ತಿಯನ್ನೇ ಅಡವಿಗೆ ಕೊಳ್ಳಬಾರದೇ" ಎಂದ. ನನಗೆ ಅಡವು, ಆಸ್ತಿ ಎಲ್ಲಾ ತಿಳಿಯದೇ ಹೋದರೂ, ಅವನ ಸಹಾನುಭೂತಿ ತಿಳಿಯುತ್ತಿತ್ತು "ಅವರವರ ಸುಖ-ದುಃಖ ಅವರವರಿಗಂತೆ. ಅವರವರ ಕೈ ಅವರವರ ತಲೆಯ ಮೇಲಂತೆ. ಒಳ್ಳೇ ಧರ್ಮ" ಎಂದು ಕಣ್ಣೀರು ಸುರಿಸಿ ಸಿಡಿದು ಬೀಳುತ್ತಿದ್ದ.

ಕೊನೆಗೂ ಅವನ ಸತ್ಯಾಗ್ರಹ ಗೆಲ್ಲಲಿಲ್ಲ. ಚಿಕ್ಕಪ್ಪ, ಎಲ್ಲಾ ಮನೆ ಮಾರು, ಆಸ್ತಿ ಮಾರಿ, ಹೆಂಡತಿಯನ್ನು ಅವರ ತಾಯಿಯ ಮನೆಯಲ್ಲಿ ಬಿಟ್ಟು, ಒಬ್ಬ ಹುಡುಗನನ್ನು ಯಾರಿಗೋ ದತ್ತಕ್ಕೆ ಕೊಟ್ಟು, ಉಳಿದವ ರೊಡನೆ ಮದರಾಸಿಗೆ ಹೋಗಿ, ಎಲ್ಲೋ ಹೋಟಲಲ್ಲಿ,— ರಾಯರಂಥ ದೊಡ್ಡ ಮನೆತನದವರು, ಹೋಟಲಲ್ಲಿ—ಕೆಲಸಕ್ಕೆ ನಿಂತರು. ದೊಡ್ಡ ರಾಯರು: "ಅವರವರ ಅದೃಷ್ಟಕ್ಕೆ ಏನು ಮಾಡಲಾಗುತ್ತದೆ? ಕೊಡುವ ಕಾಲಕ್ಕೆ ದೇವರುಕೊಟ್ಟ; ಕೊಂಡು ಹೋಗುವಾಗ್ಯೆ ಕೊಂಡು ಹೋಗು ತ್ತಾನೆ .......ಅವರವರ ತಲೆಗೆ ಅವರವರ ಕೈ" ಎಂದು ವೇದಾಂತ ಪಠಿ ಸಿದರು. ಅಮ್ಮನವರೂ "ಅವರವರ ಸುಖದುಃಖ್ವಾ........" ಎಂದು ರಾಗ ಎಳೆದರು.

ಶಂಭುವಿಗಾದ ವೇದನೆ, ಸಂಕಟ ನಾನು ಬಲ್ಲೆ. ಅವನ ಮನಸ್ಸು ಸರಿಯಿರಲಿಲ್ಲ. ಪ್ರಾಯಕ್ಕಿಂತ ಹೆಚ್ಚು ಬೆಳೆದ ಮನಸ್ಸು. ಸ್ಥಿತಿಗತಿಯ ಅರಿವು ಆಗುತ್ತಿತ್ತು. ಮನಸ್ಸು ಬಹಳ ಬಾಡಿ ಹೋಗಿತ್ತು. ಸ್ವಲ್ಪದಿನ ಅಮಾವಾಸ್ಯೆ ಕವಿದುಕೊಂಡಿತ್ತು. ಆದರೆ ಕೊನೆಗೆ—ಹುಡುಗರದೇ ಏಕೆ, ಮನುಷ್ಯರದು ಯಾರದೇ ಆದರೂ ವ್ಯಥೆ ಎಷ್ಟು ದಿನ ಇರುತ್ತದೆ? ಜೀವ ನಕ್ಕೊ ಸಮಗೂ ಒಂದಲ್ಲ ಒಂದು ದಿನ ರಾಜಿಯೋ, ಶರಣು-ಸಂಧಿಯೋ, ಆಗಲೇ ಬೇಕಷ್ಟೆ—ಶಂಭುವೂ ನೆಟ್ಟಗಾದ. ಮೋಡ ಚದರಿತು.

ಆದರೆ, ಆಗಲೇ ಅವನ ಸ್ವಭಾವ ಬದಲಿದ ಹಾಗೆ ನನಗೆ ಕಂಡಿತು.

ಮುಂಚೆ, ತನ್ನ ತಮ್ಮಂದಿರು, ಕೃಷ್ಣ, ಪುಟ್ಟಿ, ತಂಗಿ ರಮ ಅಂದರೆ ಜೀವ ಕೊಡುತ್ತಿದ್ದಾತ ತನ್ನ ಚಿಕ್ಕಪ್ಪನ ಮಕ್ಕಳನ್ನು ತಲೆಯ ಮೇಲೇರಿಸುತ್ತಿದ್ದ ಆತ ಈಗ ದೂರವಾದ. ಮುಂಚಿನ ಶಂಭುವಿನ 'ಧರ್ಮರಾಯತನ', 'ದಾನಿ ಕರ್ಣತನ' ಮೆಲ್ಲಗೆ ಮಾಯವಾಯಿತು. ಅವನ ಬುದ್ಧಿಯೂ–ಹಿಂದಕ್ಕೆ ಹಸನಾಗಿ ಮಂದವಾಗಿದ್ದುದು–ಈಗ ಹೆಚ್ಚು ಸೂಕ್ಷ್ಮ, ತೀಕ್ಷ್ಣವಾದಂತೆ ತೋರಿತು. ಮುಂಚಿನಂತೆ, ಯಾರಾದರೂ ಕಣ್ಣೀರು ಸುರಿಸಿ ಅತ್ತುಕರೆದರೆ,: "ಅಯ್ಯೋ ಪಾಪ! ಏನಾದರೂ ಮಾಡೋಣ" ಎಂಬ ಬೆಪ್ಪುತನ, ಎಲ್ಲ ರಿಂದಲೂ ಮೋಸಹೋಗುವುದು ನಿಂತುಹೋಗಿ, ಅವನೇ " ಚಿಂತಿಲ್ಲ, ಚಾಲಾಕಿದ್ದಾನೆ ಹುಡುಗ, ಭೋಳೇ ಧರ್ಮರಾಯನಲ್ಲ. ಶಕುನಿಯದೂ ತುಸು ಗಾಳಿತಾಗಿದೆ" ಎನ್ನುವ ಹಾಗಾಯಿತು. ಅವನ ಗೆಳೆಯರು, ಅವ ನಿಂದ ಪೆನ್ಸಿಲು-ಪುಸ್ತಕಗಳ "ಕುಂಡಲ–ದಾನ" ಪಡೆಯುವುದು ನಿಂತು ಹೋಯಿತು. ಒಳ್ಳೇಜಾಗರೂಕನಾಗಿ, ಮೈಯೆಲ್ಲಾ ಕಣ್ಣಾಗಿ, ಚಾಣಾಕ್ಷ ನಾಗಿ ಬಿಟ್ಟ.

ಅದೇ ಕಾರಣವೋ ಏನೋ, ಯಾವಾಗಲೂ ಹರಹರ ಎಂದು ಪಾಸಾಗುವವನು, ಬಹಳ ಒಳ್ಳೇ ದರ್ಜೆಯಲ್ಲಿ ಪಾಸ್ ಆದ. ಆಮೇಲೆ ಮಂಗಳೂರಿಗೆ ಕಲಿಯಲು ಯಾತ್ರೆ.

ನಾನೂ, ಅವನ ತಮ್ಮನೂ ಕೂಡಾ, ಮಂಗಳೂರಲ್ಲೇ ಕಲಿಯು ತ್ತಿದ್ದೆವು. ನಾನೂ ಅವರಿಬ್ಬರೂ ಬೇರೆಬೇರೆ ಹೈಸ್ಕೂಲಿನಲ್ಲಿ ಓದುತ್ತಿದ್ದುದ ರಿಂದ ಹೆಚ್ಚು ಅನ್ಯೋನ್ಯವಾಗಿರಲು ಅವಕಾಶವಿರಲಿಲ್ಲ. ಆದರ ನೋಡಿ ದಾಗಲೆಲ್ಲ ನನಗೆ ಆತ ಬಹಳ ಬುದ್ಧಿವಂತನಂತೆ ತೋರುತ್ತಿದ್ದ. ಮುಂಚಿನ ಶಂಭುವಿನ ಭೋಳೇಮುಖ, ಗಿಡ್ಡವಾಗಿ ಕತ್ತರಿಸಿದ ಕೂದಲು, ಹಿಂದೆ ನಾಲ್ಕೇ ಕೂದಲುಗಳ ಜಟಾ-ಜೂಟ, ಗಿಡ್ಡ ಪಂಚೆ, ಮತ್ತು ಸೊಂಟಕ್ಕಿಂತ ಕೆಳಗಿಳಿಯದ ತುಂಡು ಅಂಗಿಯ ಬದಲಿಗೆ, ಈಗ, ರಾಕ್-ಠೀಕ್ ಆಗಿದ್ದ. ಸ್ವಲ್ಪ ಸಮಯದಲ್ಲಿಯೇ ಒಂದು ಕನ್ನಡಕವೂ ಬಂದು ಅವನ ಮುಖಕ್ಕೆ ಕಳೆಕೊಟ್ಟಿತು. ಹಾಗೆಂದು ಸಿಗರೇಟು ಸೇದುತ್ತಿರಲಿಲ್ಲ. ಸಿನಿಮಾದ ವಿಪರೀತ ಹುಚ್ಚು ಇದ್ದಂತೆ ತೋರಲಿಲ್ಲ. ಕಾಫೀಭವನದ ಭಕ್ತನೂ ಆಗಿರಲಿಲ್ಲ. ಮನೆಯಿಂದ ಅಪ್ಪ ಕಳುಹಿಸಿದ ಹಣದಲ್ಲಿ ಜಾಗ್ರತೆಯಿಂದ ಒಂದಿಷ್ಟು ಉಳಿ

ಸುತ್ತಿದ್ದ. ಪಾಠದಲ್ಲಿ ಸಾಕಷ್ಟು ಚುರುಕು. ಅಲ್ಲದೆ ಅಧ್ಯಾಪಕರೊಡನೆ ತುಂಬಾ ಮಾತುಕತೆ ನಡೆಸುತ್ತಿದ್ದ. ತರ್ಕಸಂಘ, ನಾಟಕ, ಇದರಲ್ಲೆಲ್ಲಾ ಒಂದಿಷ್ಟು ಭಾಗವಹಿಸಿ, ಎಲ್ಲರಿಗೂ ಪರಿಚಿತ ವ್ಯಕ್ತಿಯಾಗಿದ್ದ. ಎಲ್ಲರೂ: "ಹುಡುಗ, ಒಳ್ಳೇ ಚಾಲಾಕಾಗಿದ್ದಾನೆ ಬುದ್ಧಿವಂತ! ಎಲ್ಲಿ ಹೋದರೂ ಮೇಲೆ ಬಂದಾನು" ಎಂದು ಹೇಳುತ್ತಿದ್ದರು. ಅವನ ತಮ್ಮ ಹಾಗಲ್ಲ. ಅಧಿಕ ಪ್ರಸಂಗಿ. ಮಾತುಗುಳಿ. ದೊಡ್ಡ ಉತ್ಸಾಹದ ಹುಚ್ಚ. ಕ್ರಿಕೆಟು, ಸಿನೆಮಾ, ರಾಜಕೀಯ ಚಳವಳ ಎಂದು ತಲೆಚಿಟ್ಟು ಮಾಡಿಕೊಳ್ಳುತ್ತಿದ್ದ. ಆದರೂ ಒಳ್ಳೇ ಹುಡುಗ

ನಾನು, ಇಂಟರ್ ಮುಗಿಸಿದಮೇಲೆ ವಿದ್ಯಾಭ್ಯಾಸಕ್ಕೆ ಶರಣುಹೊಡೆದು ಉಂಡಾಡಿಯಾಗಿದ್ದು ಬಿಟ್ಟೆ. ಮನೆಯಲ್ಲಿ ಊರುಬಿಟ್ಟು ದೂರದ ಪರ ವೂರಿಗೆ ಹೋಗಬಾರದೆಂದು ಕಟ್ಟಪ್ಪಣೆಯಾಗಿತ್ತು. ನಮ್ಮ ಶಂಭುರಾಯ— ಈಗ ಕೆ. ಎನ್. ರಾಯ—ವಕಾಲತ್ತು ಕಲಿಯಲು ಹೋದ. ಅವನ ಅಭಿವೃದ್ಧಿ ಕಂಡು ಮನೆಯವರಿಗೆಲ್ಲ ಹೆಮ್ಮೆ. ಆತ ವರ್ಷಕ್ಕೊಮ್ಮೆ, ಚೊಕ್ಕಟವಾದ ಸೂಟ್ ಹಾಕಿಕೊಂಡು, ತನ್ನ ಠೀವಿಯ ಕನ್ನಡಕದೊಡನೆ, ಊರಿಗೆ ಬಂದಾಗ, ರಾಯರಿಗೂ, ಅಮ್ಮನಿಗೂ ದೊಡ್ಡ ಹಬ್ಬ.

ಅವನ ತಮ್ಮಂದಿರೆಲ್ಲಾ ಇವನಿಗೆ 'ದೃಷ್ಟಿ' ಸೋಂಕದಂತೆ ಹುಟ್ಟಿ ದವರೋ ಏನೋ. ಹಿರಿಯ ತಮ್ಮ ಹೇಳಿದೆನಲ್ಲಾ, ರಾಜಕೀಯ ಚಳ ವಳಿಯೋ ಮಣ್ಣೋ ಮಸಣವೋ ಅಂದುಕೊಂಡು ಓದುಹಾಳುಮಾಡಿ ಕೊಂಡು ಒಂದೆರಡು ಬಾರಿ ನಾಪಾಸಾದ. ಈಗ ಭಗೀರಥ ಪ್ರಯತ್ನ ದೊಡನೆ ಇಂಟರ್‌ಮಿಾಡಿಯೆಟ್ ಭವಸಾಗರವನ್ನು ಈಜಿ ಪಾರಾಗಲು ಹೇಚಾಡುತ್ತಿದ್ದ. ಅವನ ಉಳಿದ ತಮ್ಮಂದಿರು ಮೆಟ್ರಿಕ್‌ನ ಅಂತಸ್ತನ್ನು ಮುಟ್ಟಿರಲಿಲ್ಲ. 'ಒಬ್ಬರಿಗೂ ನಮ್ಮ "ಜ್ಯೇಷ್ಠ" ನ ತಲೆ ದೇವರು ಕೊಡ ಲಿಲ್ಲೆಂದು' ರಾಯರೇ ಹೇಳುತ್ತಿದ್ದರು.

ಶಂಭು-ಅಲ್ಲ ಕೆ. ಎಸ್ ವಕಾಲತ್ ಕಲಿತಾಯಿತು. ರಾಯರು ಹೊಟ್ಟೆತುಂಬಾ ಹಾಲು ಕುಡಿದರು. ಅಮೃತಪಾನವೇ ಆದಂತಾಯಿತು. ಅವರ ಅಭಿಲಾಷೆಯೆಲ್ಲಾ ಕೈಗೂಡಿದಹಾಗೆ ತೋರುತ್ತಿತ್ತು. ಸ್ವರ್ಗ

ಲೋಕಕ್ಕೆ ಮೂರೇ ಗೇಣು ಉಳಿಯಿತು. ಈ ಮೂರು ನಾಲ್ಕು ಹುಡುಗರ—ಮುಖ್ಯತಃ ಶಂಭುವಿನ - ಅಲ್ಲ ಕೆ. ಎಸ್. ರಾವ್‌ನ (ಅವನಿಗೆ ಶಂಭು ಎಂದು ಕರೆದರೆ ಈಗ ಮುಖ ಸಿಡಿಗುಟ್ಟುತ್ತಿತ್ತು) ವಿದ್ಯಾಭ್ಯಾಸದ ಕಷ್ಟದಲ್ಲಿ, ಆಸ್ತಿಯ ಮೇಲೆ, ಮನೆಯಮೇಲೇನೋ, ಸ್ವಲ್ಪ ಸಾಲವಾಗಿತ್ತು ಅನ್ನುವ. ಆದರೆ ಇನ್ನೇನು? "ನಮ್ಮ 'ರುಸ್ತುಂ' ಹುಡುಗ ಚಿನ್ನದ ಮಳೆಗರೆಯುತ್ತಾನೆ. ಈ ಸಾಲ ಎಲ್ಲಾ ಯಾವ ಲೆಕ್ಕ? ರಮನ ಮದುವೆಯ ಚಿಂತೆಯೂ ಇರಲಿಲ್ಲ. ಏಕೆಂದರ ನಮ್ಮ ಹೊಸ ವಕೀಲ ಪುತ್ರ ರತ್ನನನ್ನು ತೋರಿಸಿ, "ಅದಲಿ ಬದಲಿ" ವ್ಯಾಪಾರ ಮಾಡುವುದೆಂದು ಮುಂಚಿನಿಂದಲೂ ಅವರ ದೂರಾಲೋಚನೆಯೇ ಇತ್ತು. ರಮನನ್ನು ಬೆಳ್ಳಿ ಬ್ರೈಲಿನ ಸಾವಿರ ಮುಡಿ ಅಕ್ಕಿಯ ಧನಿ ರಾಮಶರ್ಮರ ಮಗ ಸುಂದರನಿಗೆ ಕೊಡುವುದೆಂದೂ, ಅವರ ತಮ್ಮನ ( 'ವರೂ ಸಾಧಾರಣ ಕುಳವಲ್ಲ; ಸ್ಥಿತಿವಂತರೇ) ಮಗಳನ್ನು ನಮ್ಮ ಕೆ. ಎಸ್. ಗೆ ತರುವುದೆಂದೂ ಒಳಗಿಂದೊಳಗೇ ಪಂಚಾತಿಗೆಯಾಗಿತ್ತು. ರಮನಿಗೂ ಆ ಹುಡುಗ ಸುಂದರನಮೇಲೆ ಮನಸಿತ್ತು ಅವನೂ ನನ್ನೊಡನೆ ಮಾತಾಡಿದ್ದಾಗ ಈ ವಿಷಯ ತುಂಬಾ ಆಶೆ ತೋರಿಸಿದ್ದ ಒಳ್ಳೇ ಗುಣದ ಹುಡುಗ ರಮನೇ—(ನನ್ನ ಮನಸ್ಸಿನ ಆಶೆ ಆಗ ಅವಳಿಗೆ ಗೊತ್ತಿರಲಿಲ್ಲ ಅನ್ನಿ)—ನನ್ನೊಡನೆ ಸುಂದರನ ವಿಷಯ ಮನಸ್ಸು ಬಿಚ್ಚಿ ಮಾತನಾಡಿದ್ದಳು. ನೆನಸಿದಂತೇ ಆಗುತ್ತಿದ್ದರೆ ಬಹಳ ಹಾಳ್ಜೇನು ಸುರಿಯುತ್ತಿತ್ತು.

ಆದರೆ, ನಮ್ಮ ರಾಯರ ಕನಸು ನೆರವೇರಲಿಲ್ಲ. ಕೆ. ಎಸ್. 'ಊಹೂಂ' ಅಂದುಬಿಟ್ಟ, ಮಾತ್ರವಲ್ಲ; ಮರುಟಪಾಲಿನಲ್ಲೇ ಅಮ್ಮ ಅಮ್ಮಂದಿರ ಆಶೀರ್ವಾದಕ್ಕಾಗಿ ಅರ್ಜಿ ದಾಖಲ್' ಮಾಡಿದ. ಮದ್ರಾಸಿನಲ್ಲೇ ನಮ್ಮೂರವರಾದ, ವಕೀಲ ಲಕ್ಷ್ಮೀನಾರಾಯಣರಾಯರು ಒಳ್ಳೇ ಸಂಪತ್ತು, ಕೀರ್ತಿ ಸಂಪಾದಿಸಿದ್ದರು. ಅವರ ವಕೀಲಕಿಯ ಕೀರ್ತಿ ಛತ್ರ-ಕೃಪಾಪೋಷಣೆಗಳನ್ನು ಅವರ ಮಗಳ (ದೊಡ್ಡ ಸುರಸುಂದರಿಯೇನಲ್ಲ. ನಾನೂ ಕಂಡಿದ್ದೇನೆ ಸಾಮಾನ್ಯ ಮಾಂಸದ ಗೊಂಬೆ; ಬಿಳಿಚರ್ಮ, ಅಷ್ಟೆ) ವರದ ಹಸ್ತದೊಡನೆ ಕೆ. ಎಸ್. ವಿನಯದಿಂದ ಸ್ವೀಕರಿಸಿದ. ರಾಯರು, ರಮನ ಮತ್ತು ಬೆಳ್ಳಿ ಬ್ರೈಲಿನ ವೈವಾಹಿಕ ಒಪ್ಪಂದದ ಕುರಿತಾಗಿ ಅವನಿಗೆ ಅಂಗಲಾಚಿ ಬರೆದಾಗ ಆತನಿಂದ, "ನನ್ನ Future ಭವಿಷ್ಯ ನೋಡಬೇಕೋ ಬೇಡವೋ?

ನೀನೇ ಹೇಳು ಅಪ್ಪಾ. ಈ ಜೇರೆ ವಿಚಾರದಲ್ಲಿ ನನ್ನ Interests ಅಭಿವೃದ್ಧಿಗೇನು ಗತಿ?" ಎಂದು ಉತ್ತರ ಬಂತು.

ಸರಿ. ಮದರಾಸಿನಲ್ಲೇ ವಿಜೃಂಭಣೆಯಿಂದ ಮದುವೆಯಾಯಿತು. ರಾಯರೂ ಎಲ್ಲರೂ ಹೋಗಿದ್ದರು. ಆದರೆ ಮನಸ್ಸಿನಲ್ಲಿ, ಈ ಸಂಭ್ರಮ. ದೊಡ್ಡವರ ನಂಟುತನಗಳ ಎಡೆಯಲ್ಲಿಯೂ, ಸ್ವಲ್ಪ ಶಂಕೆಯಿತ್ತು. ಈ ಮದ್ರಾಸು ವಕೀಲರ ಧಳಕು ಬೆಳಕು ಬೆಡಗಿನ ಒಳಗೆ, ತಮ್ಮ ಬೀಗರಮೇಲೆ ಹೆಚ್ಚು ಗೌರವವಿದ್ದಂತೆ ಕಾಣಲಿಲ್ಲ. ಆಮೇಲೆ ರಮುನ ಅವಸ್ಥೆ?

ರಮುನ ನೆಂಟಸ್ತಿಗೆ ತಪ್ಪಿಹೋಯಿತು. ಬೆಳ್ಳಿ ಬೈಲಿನವರ ಹುಡುಗಿ ಒಳ್ಳೇ ಬೆಳೆದು ನಿಂತಿದ್ದಳು. ಅವರ ಹುಡುಗರಿಗೇನೂ "ಅರ್ಜೆಂಟಾ" ಗಿರಲಿಲ್ಲ. ಹುಡುಗರಿಗೇನು? ಎಸವನಂತೆ ಬೆಳೆದು ಇರುತ್ತಾರೆ. ಆ ಹುಡುಗಿಗೆ ಬೇರೆ ಕಡೆ ನೋಡಿ, ಸುಂದರನನ್ನು ಸಾಟಿ (ಅದಲಿ-ಬದಲಿ) ವ್ಯಾಪಾರ ಮಾಡಿ, ಆ ಹೊರೆ ನೀಗಿಕೊಂಡರು. ರಮುನಿಗೆ ತುಂಬಾ ಸಂಕಟವಾಗಿರಬೇಕು. ಆದರೆ ಹುಡುಗಿ ಮಾತನಾಡದೆ ಕಣ್ಣಲ್ಲೇ ದುಃಖತುಂಬಿ ನುಂಗಿಕೊಂಡಳು. ಅವಳು ದೊಡ್ಡ ರೂಪವತಿಯಲ್ಲ. ರಾಯರ ಈಗಿನ ಹಣಕಾಸಿನ ಸ್ಥಿತಿ ... ...ಮಗನ ವೈಭವ ಇನ್ನೂ ಮೂಡಿರಲಿಲ್ಲ ತಾನೆ; ಸೂರ್ಯೋದಯವಾಗಿರಲಿಲ್ಲ ..ಅಷ್ಟು ಉತ್ಕೃಷ್ಟವಾಗಿರಲಿಲ್ಲ. ಆದುದರಿಂದ, ಒಳ್ಳೇ ವರ ಬರಲಿಲ್ಲ. ಹುಡುಗಿಯ ರೂಪು-ಗುಣಗಳಿಗಿಂತಲೂ, ಹುಡುಗಿಯ ಜನ್ಮದಾತನ ಹಣ ಕಾಸನ್ನು ನೋಡಿಕೊಂಡೇ ವರಗಳು ಬರುತ್ತವೆ. ಕೊನೆಗೆ, ಉಪಾಯವಿಲ್ಲದೆ, ನನ್ನಂಥ, ನಾಲ್ಕಾರು ತುಂಡು ಹೊಲಗಳ ಏಕಚಕ್ರಾಧಿಪತಿ ಉಂಡಾಡಿ ಸುದಾಮನಿಗೇ ಭಿಕ್ಷೆಯಾಗಿತ್ತರು. ರಮು, ನನ್ನ ಗುಡಿಸಲಿನಲ್ಲಿ ಲಕ್ಷ್ಮಿಯ ಹಾಗೇನೋ ಇದ್ದಾಳೆ. ಅವಳನ್ನು ದೂರಿದರೆ ನನ್ನ ನಾಲಿಗೆಯಲ್ಲಿ ಹುಳು ಹುಟ್ಟೀತು. ಆದರೆ ಅವಳ ಕಣ್ಣಲ್ಲಿ ಕವಿಯುವ ಮೋಡ, ಆಗಾಗ್ಯೆ ಮೂಡುವ ದೂರದ ನೋಟ, ಹಗಲುಗನಸಿನ ಬೈಗು, ನೋಡಿ ನನಗೆ ಬೆಳ್ಳಿ ಬೈಲಿನವರ ಐಶ್ವರ್ಯ, ಸುಂದರನ ರೂಪ (ನಾನು ವೊಂಡು ಮೂಗಿನ ವಾಮನಾವತಾರಿಯೆಂದು ಒಪ್ಪಿಕೊಳ್ಳುವ ಸತ್ಯಪ್ರಿಯತೆ ನನ್ನಲ್ಲಿದೆ) ನನಗೇ ಜ್ಞಾಪಕವಾಗುತ್ತಿತ್ತು.

ಅಯ್ಯೋ, ಎಲ್ಲಿಂದ ಎಲ್ಲಿ ಬಂದೆವು, ಕತೆಬರಿಯುವವರಿಗೂ ತಮ್ಮ

ತಮ್ಮ ಸುಖದುಃಖ ಅಂದರೆ ಅಷ್ಟು ಪ್ರಿಯನೋಡಿ. ಈಗ, ಶಂಭು—ಅಲ್ಲ— ಕೆ. ಎಸ್. ನ ಚರಿತ್ರೆ ಹೇಳುತ್ತಿರೋದು. ನನ್ನ ಸುಖದುಃಖ ನಿಮಗ್ಯಾಕೆ ಓದಲಿ?

ಅವನ ಆಕಾಂಕ್ಷೆಯನ್ನು ದೇವರು ಮೆಚ್ಚಿರಬೇಕು. ಅವನ Future-ಭವಿಷ್ಯ ಅವನಾಶಿಸಿದ ಹಾಗೇ ಆಯಿತು. ಶ್ವಶುರವರ್ಯರ ವಕೀಲಕಿಯೆಲ್ಲಾ ಇವನ ಬುಟ್ಟಿಗೆ ಬಿತ್ತು. ಕೈತುಂಬಾ ಸಂಪಾದನೆಯೊಡನೆ, ಒಳ್ಳೇ ಚಾಣಾಕ್ಷನೆಂಬ ಹೆಸರೂ ಪಡೆದ. ಕಾರ್ಪರೇಷನ್ನಿನ ಮೆಂಬರಿಕೆಯ ಮೇಲೂ ಕಣ್ಣು ಹಾಕಿದ್ದ, ಅದಕ್ಕಾಗಿ ಆಗಾಗ್ಯೆ, ಹುಡುಗಿಯರ ಶಾಲೆಗಳ "ಸ್ಕೂಲ್ ಡೇ" ಗಳಿಗೆ ಅಧ್ಯಕ್ಷನಾಗಿ ಹೋಗುತ್ತಿದ್ದ. ಒಂದೆರಡು ಕಡೆ ಘಂಟಾಘೋಷವಾಗಿ ಸಣ್ಣ ಪುಟ್ಟದಾನ—ಸ್ಕಾಲರ್‌ಷಿಪ್ ಕೂಡಾ ಮಾಡಿದ್ದ.

ಸುರುವಿಗೇನೋ ಮನೆಗೂ ಹಣ ಕಳಿಸುತ್ತಿದ್ದ. ರಾಯರು ಬಹಳ ಹಿಗ್ಗುತ್ತಿದ್ದರು ತಮ್ಮ ಬಾಲಚಂದ್ರನ ಉತ್ಕರ್ಷೆಯನ್ನು ಕಂಡು. ಕೊನೆಗೆ ಬಾಲಚಂದ್ರನಿಗೇ, ತನ್ನದೇ ಬಾಲಚಂದ್ರೋದಯವಾದಾಗ, ಅಂದರೆ ಮಕ್ಕಳು ಮರಿ ಹುಟ್ಟಿದಾಗ, ಮನೆಗೂ ಆತನಿಗೂ ಇದ್ದ ಆರ್ಥಿಕ ಸಂಬಂಧ ತುಸು ಬಡಿಸಿತು. ಅಲ್ಲದೆ ಮದ್ರಾಸೆಲ್ಲಿ? ಸಣ್ಣ ಕಂಬಳವೆಲ್ಲಿ? ರಕ್ತಬಾಂಧವ್ಯಕೂ ಮೈಲುಗಳ ಮಿತಿಯಿದೆ ನೋಡಿ. ೫೫೦ ಮೈಲು ಸ್ವಲ್ಪ ಹೆಚ್ಚೆಂದೇ ಹೇಳಬೇಕು. ಅಲ್ಲದೆ, ಅವನ ಹೆಂಡತಿಗೂ ಹಿತಾಹಿತ ಜ್ಞಾನವಿಲ್ಲವೇ? ಒಳ್ಳೆಯದು—ಕೆಟ್ಟದು ಅರಿಯದವಳುವೇ?.. ....."ತಂದೆ, ತಾಯಿ, ಇಂಟರ್‌ನಲ್ಲಿ ಮುಳುಗೇಳುತ್ತಿರುವ ತಮ್ಮ, ಕಾಲೇಜ್ ಮೆಟ್ಟಲೇರುವ ತಮ್ಮಂದಿರ ದಣ್ಣ ಸೇನೆಯೆಂದು ನಾವು ಕಣ್ಣುಮುಚ್ಚಿ ದಾನಮಾಡಿದರೆ, ಇನ್ನು, ನಮ್ಮ ಮಕ್ಕಳಿಗೇನು ಗತಿ? ಲೈಫ್ ಇನ್‌ಷೂರೆನ್ಸಿನ ಪಾಲಿಸಿಗೆ—೫೦,೦೦೦ ರೂಪಾಯಿನದು— ಕಂತುಕಂತಿಗೆ ಕಟ್ಟಬೇಡವೇ? ನಮ್ಮ ನಮ್ಮ ಸುಖ ದುಃಖ ನಾವು ನೋಡಿಕೊಳ್ಳದೆ, ಬೇರೆಯವರನ್ನು ಎಷ್ಟೆಂದು ಹೊರುವುದು? ನೋಡಿ ಇನ್‌ಷೂರೆನ್ಸಿನ ಕಂತು ಖಂಡಿತ ಮರೆಯಬೇಡಿ. ತಿಳೀತೇಂದ್ರೆ?"

ತಮ್ಮ ಕೃಷ್ಣ ಇಂಟರ್‌ಮೀಡಿಯೇಟ್ ಹೇಗೂ ಈಸಿ ದಡ ಸೇರಿದ. ಹೇಗೂ ಹಠದಿಂದ ಓದಿ,-(ಹುಡುಗನಿಗೆ ಮೆದುಳಿಲ್ಲದೇನಲ್ಲ: ದಡ್ಡತನ ಅಷ್ಟೆ)-

ಒಳ್ಳೇ ಕ್ಲಾಸ್ ಕೂಡ ಪಡೆದ. ವೈದ್ಯಕೆ ಕಲಿಯಬೇಕೆಂದು ಆಶೆ. ರಾಯರೂ "ಅದಕ್ಕೇನಂತೇ? ನಮ್ಮ ಶಂಭು ಸಂಪಾದಿಸುತ್ತಾನೆ ನಿಮಗೆಲ್ಲಾ ದಾರಿ ತೋರಿಸುತ್ತಾನೆ ನನಗಿನ್ನು ವಾನಪ್ರಸ್ಥಾಶ್ರಮ" ಎಂದು ಹೇಳಿ ಶಂಭುವಿಗೆ ಈ ವಿಚಾರ ಕಾಗದ ಬರೆದರು. ಮದ್ರಾಸಿನಿಂದ ೫೦ ರೂಪಾಯಿಗೊಂದು ಚೆಕ್ ಬಂತು. "ಅಪ್ಪಾ, ನೀನು ಸ್ವಲ್ಪ ನಮ್ಮ ತಾಪತ್ರಯದ ಯೋಚನೆ ಮಾಡಬೇಕು. ನನಗೂ ಮಕ್ಕಳಿದ್ದಾರೆ; ಮದ್ರಾಸಿನಲ್ಲಿ ಖರ್ಚೋ ಅಟ್ಟಕ್ಕೇರುತ್ತದೆ. ಆಮೇಲೆ ನನ್ನ future, ನನ್ನ ಮಕ್ಕಳ future ನ ವಿಚಾರ ಮಾಡಬೇಡವೇ? ಇಷ್ಟು ಹೇಗೂ ತಿಳಿಸಿದ್ದೇನೆ. ಇನ್ನು ಮುಂದೆ ನನ್ನಿಂದ ಸಾಗದ ಬಾಬತು. ನನ್ನನ್ನು ದೂರ ಬೇಡಿ. ನಡುನೀರಿನಲ್ಲಿ ಕೈ ಬಿಟ್ಟಿನೆಂದು ಅನ್ನಬಾರದು ಮತ್ತೆ. ನಿಮಗೂ ಗೊತ್ತು ಸುಖದುಃಖ ತಾಪತ್ರಯ ನಮ್ಮ ಕಷ್ಟಸುಖ,—ಸಂಸಾರ ಅನುಭವಿಸಿದ ನಿಮಗೆ ಗೊತ್ತಾಗದಿರಲಿಕ್ಕಿಲ್ಲ."

ರಾಯರು "ಪಾಪ! ಅವನ ಕಷ್ಟ ನಮಗೆ ಹೇಗೆ ತಿಳಿಯುತ್ತದೆ? ದೂರದಲ್ಲಿ ಮದ್ರಾಸು, ದೊಡ್ಡವಕೀಲಿ ಎಂದು ನುಣ್ಣಗೆ ಕಾಣುತ್ತದೆ ಅವನ ಸುಖದುಃಖ ಅವನೇ ಬಲ್ಲ." ಎಂದು ಉಸ್ಸಪ್ಪಗರೆದರು. ಅಮ್ಮನವರು ಸ್ವಲ್ಪ ಕಟುವಾಗಿ ಗೊಣಗಿ: ''ನಾಟಗಾತಿ' ನನ್ನ ಮಗನ ಮೇಲೆ ಮಂಕು ಬೂದಿ ಎರಚಿದ್ದಾಳೆ'' ಎಂದು ಸೊಸೆಯನ್ನು ಶಪಿಸಿ, ಅತ್ತೆಯ ಪಾತ್ರವನ್ನು ಅಭಿನಯಿಸಿದರು. ಅಲ್ಲೇ ಕೂತು ನೋಡಾ ಹೊಡೆಯುತ್ತಿದ್ದ ನನಗೆ ಹಿಂದಿನ ಕತೆ ನೆನಪಾಯಿತು. ''ಅಯ್ಯೋ, ಅವನದೇನು ತಪ್ಪು, ಅಪ್ಪ, ಅಮ್ಮ ಕಲಿಸಿದ ಪಾಠ ಚೆನ್ನಾಗಿ ಒಪ್ಪಿಸುತ್ತಿದ್ದಾನೆ" ಎಂದುಕೊಂಡೆ. ಅಲ್ಲೇ ಕತ್ತು ಚಾಚಿ, ಉತ್ಕಂಠನಾಗಿದ್ದ, ಕೃಷ್ಣ ಧಡಕ್ಕನೆದ್ದು ಹೊರಗೆ ಹೋಗಿ, ಗಟ್ಟಿಯಾಗಿ ಉಗುಳಿದ. ''ಸುಖದುಃಖವಂತೆ, ಮಣ್ಣು ಮಸಣ; ಸುಖ ಅವನಿಗೆ, ದುಃಖ ನಮಗೆ. ಕಣ್ಣಲ್ಲಿ ರಕ್ತವಿಲ್ಲದ ಜಾತಿ'' ಎಂದು, ತನ್ನ ಒಡೆದ ಕನಸುಗಳನ್ನೆಲ್ಲಾ ಬಿಸಾಕಿ ಹೊರಗೆ ಹೊರಟ.

ರಾಯರ ಕೂದಲು ಹಣ್ಣಾಗಿತ್ತು. ಅವರ ದೆಸೆಯೂ ತಿರುಗುತ್ತಾ ಬಂದಿತ್ತು. ಅವರು ಆ ಆಸ್ತಿ ತೆಗೆದುಕೊಂಡದ್ದು ಒಳ್ಳೆಯದಾಗಲಿಲ್ಲ ಆದನ್ನು ಮಾರಿದ ಮುಂಚಿನ ಧನಿ ದೊಡ್ಡ ಘಟಿಂಗ, ಪಾತಾಳಶಕುನಿ. ಆಸ್ತಿ ಮಾರಿದ ಮೇಲೆ, ತನ್ನ ಸೊಸೆಯಿಂದ, ಕುಟುಂಬದವರಿಂದ, ಅನಂತವಾಗಿ,

ವೈರಾವಣನ ಪೀಳಿಗೆಯಂತೆ ವ್ಯಾಜ್ಯಹೂಡಿಸಿದ. ಮುಂಚಿನ ಒಕ್ಕಲು ಗಳನ್ನು ಗದರಿಸಿ, ಬೆದರಿಸಿ ಗೇಣಿ ಸೆಳೆದುಕೊಂಡ. ಈ ಶ್ರೇಷ್ಠಿ ಭಯಂಕರ ನಾಗಪ್ಪ ಶೆಟ್ಟಿಯೆದುರು "ಕಾಯಿಹುಳಿ" ಬ್ರಾಹ್ಮಣರದು ಏನು ನಡೆದೀತು? ಅದರಮೇಲೆ ಹೇಳಿದ್ದೆನೆಲ್ಲಾ ವಿದ್ಯಾಭ್ಯಾಸದ ಸಾಲ-ಸೋಲ ಎಂದು. ಹಾಗೂ ಹೀಗೂ ದಿನ ಕೆಟ್ಟಿರಬೇಕು. ಮಕ್ಕಳೆಲ್ಲಾ ಕಾಲೇಜ್-ಹೈಸ್ಕೂಲನ್ನು ಅಷ್ಟಷ್ಟರಲ್ಲೇ ಬಿಟ್ಟು ಬಿಟ್ಟು ಮನೆಗೆ ಬಂದು, ಹರಹರ ಎಂದು ದಿನ ದೂಡ ಬೇಕಾಯಿತು. ಸಣ್ಣವರು ಹಾರೆಗುದ್ದಲಿ ಹಿಡಿದು ನಾಲ್ಕು ಮೆಣಸು-ಸವುತೇಕಳ ಬೇಸಾಯ ಮಾಡಲು ಹಿಂಜರಿಯಲಿಲ್ಲ. ಆದರೆ ಕಾಲೇಜು—ಸಿಗರೇಟಿನ ರುಚಿ ತಾಗಿದವರಿಗೆ ಅನ್ನ ಸಂಹಾರವೊಂದೇ ಉಳಿಯಿತು. ಮುದಿಯ ರಾಯರಿಗೂ ಅವರಿಂದ ಕೆಲಸ ಮಾಡಿಸಲು ನಾಚಿಕೆಯಾಗು ತ್ತಿತ್ತು. ಇವರಿಗೆ ವಿದ್ಯೆ ಕೊಡಲು ಕೈಲಾಗದೆ, ಕರ್ತವ್ಯಭ್ರಷ್ಟನಾಗಿ, ತಂದೆಯಾಗಿ, ತಂದೆಯ ಅಧಿಕಾರ ನಡೆಸಲು ನನಗೆ ಮೋರೆಯಿಲ್ಲದೆ ಎಂದು ನನ್ನೊಡನೆ ಹೇಳುತ್ತಿದ್ದರು.

ಈಚೆಗೆ ಅಮ್ಮ ಕಾಯಿಲೆ ಬಿದ್ದರು. ಮುದಿಪ್ರಾಯದ ವಾತ. ಹಡೆದು ಹಡೆದು, ದುಡಿದು ದುಡಿದುದರ ನಿಶ್ಯಕ್ತಿ ಮತ್ತೆ ಏನೋ ಏನೋ. ನಮ್ಮ ಲ್ಲಿಗೆ ತರಿಸಿ, ರಮ, ಆದಷ್ಟು ಉಪಚಾರ ಮಾಡಿದಳು. ಡಾಕ್ಟರರಿಗೆ ತೆರಲು ನಮ್ಮಲ್ಲಿ ಯಾರಿಗೂ ತ್ರಾಣವಿರಲಿಲ್ಲ. ಈಗ ಅವರ ಮನೆಯೂ ಅಡ ವಾಗಿದ್ದಿತು. ನನಗಿದ್ದುದು ಮೂರು ಹೊತ್ತಿನ ಗಂಜಿಗೆ ಗತಿಮಾತ್ರ ಎಂದು ನಿಮ್ಮಲ್ಲಿ ಮೊದಲೇ ಅರಿಕೇಮಾಡಿದ್ದೇನೆ. ಡಾಕ್ಟರರ ಮದ್ದು ಮಾಡಿದರೆ ಗುಣವಾಗುವುದೆಂದು ನಮಗೆ ಗೊತ್ತಿತ್ತು. ಆದರೆ, ಡಾಕ್ಟರೋ-ಮುಖಾ ನೋಡಿದರೆ ದಕ್ಷಿಣೆ ಎಂದು ಕೈ ಚಾಚುತ್ತಾರೆ. ಮಂಗಳೂರಿಗೆ ಕೊಂಡು ಹೋಗಿ ಹೇಗೆ ಚಿಕಿತ್ಸೆ ಮಾಡಿಸುವುದು? ಬಹಳ ಉದ್ವಿಗ್ನತೆಯಿಂದ ಮದ ರಾಸಿಗೆ ಶಂಭುವಿಗೆ ನಾವೆಲ್ಲರೂ ಬರೆದೆವು! "ಬಹಳ ಅಪಾಯಸ್ಥಿತಿ. ಬಂದು ಹೋಗು. ಅಕ್ಕಿ ಹೋಗಿ ಅನ್ನವಾಗುವಂತಿದೆ," ಎಂದು ತಿಳಿಸಿದೆವು. ಶಂಭು ಏನು ಮಾಡಿಯಾನು ಪಾಪ! ಅವನ ತಾಪತ್ರಯ ಅವನಿಗೇ ಗೊತ್ತು. ಅದು ವಕಾಲತ್ತಿನ ಸಮಯ. "ರಾಶಿರಾಶಿ ಕೇಸು ಬಂದು ಬಿದ್ದಿವೆ. ಕಕ್ಷಿ ಗಾರರ ಪಡೆಗಟ್ಟಿದೆ. ಉಪಾಯವಿಲ್ಲ. ಬಹಳಕಷ್ಟ, ದೇವರು ನಡೆಸಿ

ಅಮ್ಮನಿಗೆ ಗುಣವಾಗಬೇಕು. ಅವಳಿಗೂ (ಹೆಂಡತಿ) ಬಹಳ ದುಃಖವಾಯಿ ತೆಂದು ಅಮ್ಮನಿಗೆ ಹೇಳಿ'' ಎಂದು ಬರೆದ. ಹೊತ್ತು ಹೆತ್ತ ತಾಯಿಯನ್ನು ನೆನಸಿ 'ಹೋಗೋಣ' ಎಂದು ಎದ್ದು ನಿಂತರೆ, ಗೃಹಲಕ್ಷ್ಮಿ "ನಮ್ಮ ನಮ್ಮ ಸುಖದುಃಖ"ದ ಪಾರಾಯಣ ಮಾಡಿರಬೇಕೆಂದು ನಾನು ಊಹಿಸಿದೆ.

ನಾನು "ಚಿಕಿತ್ಸೆಗೆ ಏನು ಉಪಾಯ?" ಎಂದು ಕೇಳಿ ಬರೆದಿದ್ದೆ. ನೂರು ರೂಪಾಯಿ ಕಳಿಸಿದ, ''ನೋಡು, My dear fellow, ಇದಕ್ಕಿಂತ ಹೆಚ್ಚು ಕೊಡುವುದು ನನ್ನಿಂದ ಆಗುವ ಬಾಬತಲ್ಲ. ಪಾಪ; ಅಪ್ಪ, ಅಮ್ಮ ಕಷ್ಟ ದಲ್ಲಿದ್ದಾರೆ. ಆದರೆ ನಮಗೆ ನಮ್ಮ ನಮ್ಮ ಸುಖದುಃಖವಿಲ್ಲವೇ? ನಮ್ಮ ತಾಪತ್ರಯ ನಮ್ಮ ಜೀವ ತಿನ್ನುತ್ತಾ ಇದೆ. ನೋಡು, ಮಹಾರಾಯಾ, 'ಪರಶುವಾಕಂ' ನಲ್ಲಿ ಒಂದು ಮನೆ ಕಟ್ಟಿಸಲು ಕೈ ಹಚ್ಚಿದ್ದೇನೆ. ಅದೇ ಈಗ ಬ್ರಹ್ಮಕಪಾಲವಾಗಿ ಕಾಡುತ್ತಿದೆ. ಇದ್ದದ್ದೆಲ್ಲಾ ಸಿಮೆಂಟು ಮಣ್ಣಿಗೇ ಸರಿಯಾಗುತ್ತಿದೆ. ಮಕ್ಕಳ ಶಾಲೆ ಫೀಸು,—ಅದೂ ಯುರೋಪಿಯನ್ ಕಾನ್ವೆಂಟ್ ಸ್ಕೂಲು—ಬೇರೆ. ನೀನೇ ಯೋಚಿಸಿ ನೋಡು, ಮಹಾರಾಯ, ನಮ್ಮ ಕಷ್ಟಸುಖ........"

ಈ ಬಾರಿ, ಮುದುಕನ ವೇದಾಂತ, ಪುತ್ರರತ್ನನ ಮೇಲಿನ ಅಭಿ ಮಾನ, ಎಲ್ಲಾ 'ದುಃಖದಲ್ಲಿ ಮುಳುಗಿಹೋಯಿತು. "ಹುಟ್ಟಿಸಿದ ತಾಯಿತಂದೆ ಯನ್ನು ಮರೆತವನೇ! ಸುಖದುಃಖವಂತೆ!'' ಎಂದು ಶಪಿಸಿದರು. ಮಗ್ಗು ಲಲ್ಲೇ ಮಂಚದ ಮೇಲೆ ಮಲಗಿ, ನರಳುತ್ತಿದ್ದ, ಎಲುಬಿನ ಹಂದರವಾಗಿದ್ದ ಅಮ್ಮ: ''ಅಯ್ಯೋ ಪಾಪ! ಯಾಕೆ ಅವನನ್ನು ಅಂದುಕೊಳ್ಳುತ್ತೀರಿ. ಅವರವರ ಸುಖದುಃಖ ಅವರಿಗೇ ಗೊತ್ತು. ಯಾರ ತಲೆಗೆ ಯಾರ ಕೈ.... ನಾರಾಯಣಾ........" ಎಂದು ನರಳಿದರು.

---

# ಸತ್ಯಮೇವ ಜಯತೇ.......

ಎಂಬ **ಬೋಧಪ್ರದವಾದ ಕಥೆಯು**

ಹಿಮವತ್ಪರ್ವತದ ಜನಶೂನ್ಯ ಕಿಬ್ಬಿಯೊಂದರಲ್ಲಿ ಒಬ್ಬ ಸನ್ಯಾಸಿ ಒಂದು ಗುಹೆಯಲ್ಲಿ ಸಾಧನೆ ಮಾಡುತ್ತಿದ್ದ. ಈ ತಪೋಧನನಿಗೆ ಎಲ್ಲಿಂದಲೋ ಮೂರು ಜನ ಶಿಷ್ಯರು ಬಂದು ಸೇರಿಕೊಂಡಿದ್ದರು. ಒಬ್ಬನ ಹೆಸರು ವಜ್ರ ಧರ್ಮ, ಇನ್ನೊಬ್ಬನ ಹೆಸರು ಪುಷ್ಪಧರ್ಮ; ಮಗದೊಬ್ಬ ವೃಷಲ. ಬಹಳ ಕಾಲ ಈ ಮೂವರೂ ಗುರುವಿನ ಸೇವೆ ಮಾಡುತ್ತಾ, ದೀಕ್ಷಾಬದ್ಧರಾಗಿ ಸಾಧನೆಗಳನ್ನು ಆಚರಿಸುತ್ತಿದ್ದರು.

ವಜ್ರಧರ್ಮನ ಮೇಲೆ ಗುರುವಿಗೆ ಬಹಳ ಆದರ, ಗೌರವ, ಶ್ರದ್ಧೆ-ಭಯವೂ ಅನ್ನಬಹುದು ವಜ್ರಧರ್ಮ ಘೋರನಿಷ್ಠ. ದೇಹಸಂಯಮ, ಹಠಯೋಗ, ದೇಹದಂಡನ ಕ್ರೂರವಾಗಿಯೂ ಸ್ಥೈರ್ಯದಿಂದಲೂ ಮಾಡುತ್ತಿದ್ದ. ಶಿಶಿರ ಋತುವಿನ ರಕ್ತ ಹೆಪ್ಪುಗಟ್ಟಿಸುವ ಕ್ರೂರ ಚಳಿಯಲ್ಲಿಯೂ ಪ್ರಹರ ರಾತ್ರಿಗೇ ಎದ್ದು, ಈ ಅದ್ಭುತ ಪ್ರಾಣಿ, ಗಡ್ಡೆಕಟ್ಟಿದ ಗಂಡಕೀ ನದಿಯಲ್ಲಿ ಇಳಿದು, ಎತ್ತಿಗೇಮಟ್ಟ ನೀರಲ್ಲಿ ನಿಂತು ಮಂತ್ರೋಚ್ಚಾರಿಸುತ್ತಿದ್ದ. ಗುಹೆಯಲ್ಲಿ ಗುರುಮುನಿವರನೂ, ಶಿಷ್ಯದ್ವಯರೂ, ಎಂದಿಗಿಂತ ಹೆಚ್ಚು ರಭಸದಿಂದ ಹೋಮಮಾಡುತ್ತಾ, ಸಮಿಧೆಯನ್ನು ರಾಶಿರಾಶಿ ಒಟ್ಟಿ, ಹೋಮ ಕುಂಡದ ಅತಿಸಮೀಪವೇ ಕುಳಿತು, ಕೃಷ್ಣಾಜಿನವನ್ನು ಅಪ್ಪಿ ಹೊದೆದು ಕೊಂಡು, ದೇವತೆಗಳೆಲ್ಲಾ ಸುಟ್ಟು ಭಸ್ಮವಾಗುವ ಜೋರಿನಲ್ಲಿ ಹೋಮ ಉರಿಸುತ್ತಿದ್ದರು. ಅವರ ಮಂಜುಗಟ್ಟಿದ ಕಿವಿಗೆ ಗಂಡಕಿಯಿಂದ "ಓಂ ಭೂರ್ಭುವ.... ..." ಎಂದು ಗಾಯತ್ರಿಯನ್ನು ವಜ್ರಧರ್ಮ ತನ್ನ ವಜ್ರಕಂಠ ದಿಂದ ಕರ್ಕಶವಾಗಿ ಒದರುವುದು ಕೇಳುತ್ತಿತ್ತು. ಅದು ನಿಧಾನವಾಗಿ ಇಳಿದು ಇಳಿದು ನಿಂತೇ ಹೋದಕೂಡಲೇ, ಅವರೆಲ್ಲಾ, ಕೊಡಲಿ, ಹಗ್ಗ, ಹಿಡಿದುಕೊಂಡು, ನದಿಗೆ, ಆ ಚಳಿಯಲ್ಲಿ ಅವನನ್ನು ಶಪಿಸುತ್ತಾ ಹೋಗಿ ಅವನ ಕಂಕುಳೆಡೆಗೆ ಹಗ್ಗ ಸಿಕ್ಕಿಸಿ, ಅವನ ಸುತ್ತಲೂ ಕಲ್ಲಾಗಿ ಕಟ್ಟಿನಿಂತ ನೀರ್ಗಡ್ಡೆಯನ್ನು ಒಡೆದು, ಪ್ರಜ್ಞೆಯಿಲ್ಲದ, ಮರಕಟ್ಟಿದ ಅವನನ್ನು, ಎಳೆದು

ತೆಗೆದು, ಗುಹೆಗೆ ಹೊತ್ತು ತರುತ್ತಿದ್ದರು. ಚಳಿಗಾಲವಿಡೀ ಇದೊಂದು ಅವಾಂತರ. ಪುಷ್ಪಧರ್ಮಗೆ ಇಷ್ಟು ಚಳಿ, ಸಂಕಟ, ರಗಳೆಗಳ ಎಡೆಯಲ್ಲಿಯೂ, ಹೊಟ್ಟೆತುಂಬಾ ನಗು ಉಕ್ಕಿಬಂದು, ಗಹಗಹಿಸಿ ನಗುತ್ತಿದ್ದ— ಈ ಕಠೋರ ಸಾಧಕನ ನೀಲವಾಗಿ ಹೋದ ತುಟಿ, ಒಳಸರಿದ ಕಣ್ಣಾಲಿಗಳೆಡೆಗೆ ಬೆರಳು ತೋರಿಸಿ. ವೃಷಲ, ದುರುಗಟ್ಟಿಕೊಂಡು, ಗಾಯತ್ರೀಮಂತ್ರ ಜಪದೊಡನೆ,...... ''ಹ್ರಾಂ ಹ್ರೀಂ....ಓಂ ಭೂರ್ಭುವ. ..ಹಾಳುಮುಂಡೇದು ....ಏನು ರಗಳೆಯಪ್ಪಾ! ...ಸುಮ್ಮನೆ ಬಿದ್ದಿರಲಿಕ್ಕೆ ...ಥಾಡಿ" ಎಂದು ಸಹಸ್ರನಾಮ ಸೇರಿಸುತ್ತಿದ್ದ. ಗುರುವರ್ಯ ಮಾತ್ರ ಪುಲಕಿತನಾಗಿ, ಈ ಘೋರ ಸಾಧನೆಗೆ ಬೆರಗಾಗಿ ಶಿಷ್ಯನ ಕಾಲ ಒಡದಲ್ಲಿ ಕೈ ಜೋಡಿಸಿ ಕೂರುತ್ತಿದ್ದ!

ವೃಷಲ, ಒಳ್ಳೆಯ ಶಿಷ್ಯ. ಕಂದಮೂಲಗಳನ್ನು ಆರಿಸಿ ತರುವುದರಲ್ಲಿ ಮಹಾಪ್ರವೀಣ ಮರಗೆಣಸು, ಕಲ್ಲುಗೆಣಸು, ಪಾಯಳಗೆಡ್ಡೆ ಅವನು ಕಾಲಿಟ್ಟಲೆಲ್ಲಾ ಉದ್ಭವಿಸುತ್ತಿದ್ದ ಹಾಗೆ ಇತ್ತು. ಆಗಾಗ್ಗೆ ದೂರದ ಗ್ರಾಮಕ್ಕೂ ಹೋಗಿ ಒಳ್ಳೆ ಭಿಕ್ಷೆ ತರುತ್ತಿದ್ದ.

ಪುಷ್ಪಧರ್ಮನ ಮರ್ಜಿಯೇ ಬೇರೆ. ಗುರುವಿಗೆ ಅವನಲ್ಲಿ ಪ್ರೀತಿಯಿದ್ದರೂ, "ಸಂಸ್ಕಾರವಾಗಲಿಲ್ಲ, ಪಕ್ವತೆ ಸಾಲದು" ಎನ್ನುತ್ತಿದ್ದರು. ಮೋಕ್ಷ ಎಂಬೋದು ಈತನಿಗೆ ಸಧ್ಯಕ್ಕೆ ಸಾಧಿಸುವ ಬಾಬತಲ್ಲವೆಂದು ಅವರಿಗೆ ಗೊತ್ತಿತ್ತು. ವಜ್ರಧರ್ಮ ಈತನನ್ನು "ಅಜ್ಞಾನಿ, ಲೌಕಿಕ, ತಾಮಸಿ" ಎಂದೂ ಒಮ್ಮೊಮ್ಮೆ ''ಶುದ್ಧಮುಟ್ಠಾಳ'' ನೆಂದೂ ಹೇಳಲು ಹೇಸುತ್ತಿರಲಿಲ್ಲ. ವಜ್ರಧರ್ಮ ಕಂಡದ್ದನ್ನು ನಿರ್ದಾಕ್ಷಿಣ್ಯವಾಗಿ ಕೂದಲೆಳೆಯಷ್ಟೂ ವ್ಯತ್ಯಯವಿಲ್ಲದೆ ಕಟುವಾಗಿ ಸ್ಪಷ್ಟವಾಗಿ, ಹೇಳುತ್ತಿದ್ದ. ಮಹಾ ಸತ್ಯಪರಾಯಣ. ಗುರು ಅವನ ಸತ್ಯಯೋಗವನ್ನು ಕಂಡು ನಡುಗಿ, ಮನಸ್ಸಿನಲ್ಲೇ ನಮಿಸುತ್ತಿದ್ದರು. ''ಈ ಕೆಂಡದಂಥ ಯೋಗಿಗೆ ನಾನು ಎಲ್ಲಿನ ಬಡ ಗುರು? ಎಂದು ಮನಸ್ಸಿನಲ್ಲೇ ಅನ್ನುತ್ತಿದ್ದರು.

ವಜ್ರಧರ್ಮನ ಸತ್ಯಪರಾಯಣತೆ ಅಂದರೆ ಭಯಾವಹವೇ ಸರಿ. ತನ್ನ ಹಿಂದಿನ ಸಾಂಸಾರಿಕ ಜೀವನದ ಪ್ರೇಯಸಿಯ ನೆನಪು, ಮಾಯೆಯ ಇಂದ್ರಜಾಲದಿಂದ, ಈ ಕಾದ ಮರುಭೂಮಿಯ ಮೇಲೂ ನೆರಳು ಮೂಡಿಸಿದರೆ,

ಕೂಡಲೇ ಗುರುಗಳೆದುರು "ತನ್ನ ಪಾಪ" ಎಂದು ಎದೆಬಿಚ್ಚಿ, ಮುನ್ನೂರು ಸೂರ್ಯನಮಸ್ಕಾರ, ಲಕ್ಷ ಗಾಯತ್ರೀಜಪ ಮಾಡಿ, ದಿನಾರ್ಧ ತಲೆ ಕೆಳಗೆ ಕಾಲು ಮೇಲಾಗಿ (ಶೀರ್ಷಾಸನವಾಗಿ) ನಿಂತು ಪ್ರಾಯಶ್ಚಿತ್ತಮಾಡಿಕೊಳ್ಳು ತ್ತಿದ್ದ. ಗುರು ಅವನ ಉಜ್ವಲಸಾಧನೆ ಕಂಡು ನಡುಗುತ್ತಿದ್ದರು

ಪುಷ್ಪಧರ್ಮನ ರೀತಿನೀತಿ ಒಂದು ತುಸು ಹಾಗೆ ಹಾಗೇ. ಭಿಕ್ಷೆಗೆ ಎಂದು ವರುಷಕ್ಕೊಮ್ಮೆಯೋ ಎರಡು ಬಾರಿಯೋ ಗ್ರಾಮಾಂತರಕ್ಕೆ ಹೋದರೆ, ಮಹಾರಾಯ ಎಲ್ಲಿ ಏನು ಮಾಡುತ್ತಿದ್ದನೋ ಗೊತ್ತಾಗುತ್ತಿರ ಲಿಲ್ಲ. ವೃಷಲ, ಇವನ ಭಿಕ್ಷಾಟನೆಯ ಮಾತು ಎತ್ತಿದರೆ, ಕಣ್ಣು ಮಿಟಕಿಸಿ, ಹಲ್ಲುಕಿರಿಯುತ್ತಿದ್ದ. ಭಿಕ್ಷಾಟನೆಯೋ........ಮತ್ತಾವುದೋ, ಮುಗಿಸಿ ಪುಷ್ಪ ಧರ್ಮ ಹಿಂದೆ ಬಂದಾಗ ಅವನ ಕಣ್ಣು ಮಿಂಚುತ್ತಿತ್ತು. ಅಂಗಾಂಗದಲ್ಲಿ ಕುಣಿತವಿತ್ತು. ವಜ್ರಧರ್ಮ ಅವನನ್ನೇ ದುರುಗುಟ್ಟಿ ನೋಡಿ ಮುಖ ತಿರ ವುತ್ತಿದ್ದ. 'ಭೋ! ಅರ್ಜುನ–ಸನ್ಯಾಸೀ' ಎಂದು ಮೂದಲಿಸುತ್ತಿದ್ದ. ಈತ, "ಭೋ ಪಾಷಾಣ ಸನ್ಯಾಸೀ" ಎಂದು ಕೇಕೆ ಹೊಡೆದು ಉತ್ತರಿಸುತ್ತಿದ್ದ.

ಗುರುವಿಗೆ ವೃದ್ಧಾಪ್ಯವಲ್ಲದಿದ್ದರೂ, ನಿರ್ವಾಣಕಾಲ ಅಕಸ್ಮಾತ್ತಾಗಿ ಸಂಧಿಸಿತು. ಅದೊಂದು ಸಣ್ಣ ಕತೆ. ಒಂದುದಿನ ಶಿಷ್ಯರು ಸಮಿಧೆ ತರಲು ಹೋಗಿದ್ದರು. ಗುರುವೊಬ್ಬನೇ ಹೋಮಕುಂಡದ ಬಳಿ ಧ್ಯಾನಮಗ್ನ ನಾಗಿದ್ದ. ಹಠಾತ್ತಾಗಿ ಹಿಮಾಲಯಕ್ಕೆ ವಿಶೇಷವಾಗಿರುವ ಘನಘೋರ ಮಳೆಗಾಳಿ ಬಂದಿತು. ಕಣ್ಣು ಕಟ್ಟಿಸುವ ಅಜಸ್ರಧಾರೆ; ಗಗನವನ್ನೇ ಅಲು ಗಿಸಿ ಕುಲುಗಿಸುವ, ಪರಶಿವನ ಜಟೆಯಿಂದ ಹೊರಟಿತೆಂಬಂಥ ಪ್ರಚಂಡ ಬಿರುಗಾಳಿ. ಆಣೆಕಲ್ಲೂ ಸಿಕ್ಕಾಬಟ್ಟೆಯಾಗಿ ಸುರಿಯುತ್ತಿತ್ತು

ತಾಪಸನ ಧ್ಯಾನ ಹಠಾತ್ತಾಗಿ ಮುರಿಯಿತು. ಗುಹೆಯೊಳಗೆ ವರುಣ– ಮಾರುತರ ತಾಂಡವಲೀಲೆಯಿಂದ ತಪ್ಪಿಸಿಕೊಳ್ಳಲು ಓಡಿಬಂದ, ಒದ್ದೆ-ಮುದ್ದೆ ಯಾದ, ಕೆದರಿದ ಕೇಶರಾಶಿಯುಳ್ಳ ದಸ್ಯು (ಕಾಡುಜನರ) ಯುವತಿ ನಿಂತಿ ದ್ದಳು. ಕಾಡುಜನರು ಸೊಂಟಕ್ಕೆ ಸುತ್ತಿಕೊಳ್ಳುವ ಮೃಗಚರ್ಮದ ಚಿಂದಿ ಎಲ್ಲೋ ಗಾಳಿ ಸೆಳೆದು, ಗಾವುದ ದೂರ ಎಸೆದಿರಬೇಕು. ಮಾಯೆಯ ಮಾಟ! ಪೂರ್ಣನಗ್ನಳಾಗಿ, ತನ್ನ ಕಾಡುಜೀವನದ, ಕಾಡುಹೆಣ್ಣಿನ ಅಂಗ

ಸೌಷ್ಟವ, ದೇಹಕಾಂತಿ, ಅಸ್ತವ್ಯಸ್ತ ಕೇಶರಾಶಿ, ಹೊಳೆಯುವ ಕಣ್ಣು ಆಕಾಶಗಂಗೆಯಿಂದ ಸೇಚಿತ ಗೌರ-ವರ್ಣಕಾಂತಿಗಳನ್ನು ಮಾಯೆ, ಮೇನಕೆಯಾಗಿ, ಈ ಐಲು, ಬಡ, ವಿಶ್ವಾಮಿತ್ರನೆಡೆಗೆ ಕಳಿಸಿದ್ದಳು. ಫಾಲನೇತ್ರನಾದ ಮಾರಹರನೂ ಆ ಬೆಟ್ಟದ ಹುಡುಗಿ ಗಿರಿಜೆಯ ಬುಟ್ಟಿಗೆ ಬಿದ್ದನಂತೆ. ನಮ್ಮ ಗೋಸಾಯಿಗಂತೂ ಹಣೆಗಣ್ಣಿಲ್ಲ ಜನ್ಮಾವಧಿ ಸಂಚಯಿಸಿದ ಬ್ರಹ್ಮಚರ್ಯ ಹೋಮಕುಂಡದ ಎದುರು ಆಹುತಿಯಾಗುತ್ತಲಿತ್ತು.

ಹಠಾತ್ತಾಗಿ ಓಡುತ್ತೋಡುತ್ತಾ, ಒಪ್ಪೆಸುಪ್ಪೆಯಾಗಿ ಸಮಿಧೆಯನ್ನು ಎದೆಗೆ ಅಪ್ಪಿಕೊಂಡುಬಂದ ಶಿಷ್ಯರು ಮೂವರೂ ಒಳನುಗ್ಗಿದರು. ವಜ್ರಧರ್ಮನ ಕಣ್ಣು ಒಮ್ಮೆ ಮಿಂಚಾಗಿ ಮತ್ತೆ ಶಿಲೆಯಾಯಿತು. ಗುರು ಅಳುತ್ತಳುತ್ತ, ಎದೆಬಡಿದುಕೊಳ್ಳುತ್ತ, ಜಟೆಯನ್ನು ಎಳೆದು ಹರಿದುಕೊಳ್ಳುತ್ತ ಎದ್ದುಕೊಂಡ. ಅವನ ಕರುಣಾಕ್ರಂದನಕ್ಕೆ ಮಿತಿಯಿಲ್ಲದಾಯಿತು. ಎದೆಯೊಡೆದು ಅತ್ತ. ತಲೆಯನ್ನು ಗವಿಯ ಬಂಡೆಗೆ ಒಡೆದುಕೊಂಡ. ಬೆಂಕಿಯ ಕುಂಡಕ್ಕೆ ಕೈಯೊಡ್ಡಿದ. ನಂಜೆ, ಘೋರವಾದ ಜ್ವರ ಬಂತು ರಾತ್ರಿಯಿಡೀ ಮೈ ಕೆಂಡದಂತಿತ್ತು. ಶಿಷ್ಯರು ಪಕ್ಕದಲ್ಲೇ ಕುಳಿತು ಉಪಚರಿಸುತ್ತಿದ್ದರು.

ವಜ್ರಧರ್ಮನ ಹಲ್ಲು ಕಚ್ಚಿತ್ತು; ಕಣ್ಣು ಕಲ್ಲಾಗಿತ್ತು. ಮುಖದಲ್ಲಿ ತಿರಸ್ಕಾರವಿತ್ತು. ಪುಷ್ಪಧರ್ಮ ಪ್ರೇಮದಿಂದ ಹೃದಯಮುಟ್ಟಿ ಸೇವೆ ಮಾಡುತ್ತಿದ್ದ. ಗುರು ಪ್ರಜ್ಞೆಯಿಲ್ಲದೆ ಹುಚ್ಚು ಹುಚ್ಚು ಮಾತನಾಡುತ್ತಿದ್ದ. ಕಾಲ ಸನ್ನಿಹಿತವಾಯಿತೆಂದು ಎಲ್ಲರೂ ತಿಳಿದರು. ಗುರುವಿಗೂ ಜ್ಞಾತವಾಯಿತು. ಪ್ರಜ್ಞಾಹೀನನಾಗಿ, ಜ್ವರದಭ್ರಾಂತಿಯಲ್ಲಿ 'ಪಾಪ! ..... ಪಾಪ ಮಾಡಿದೆ ....ಬ್ರಹ್ಮಚರ್ಯ . ...ಇಂದ್ರಿಯನಿಗ್ರಹ.......ಅಯ್ಯೋ....... ಸರ್ವನಾಶ .. ...' ಎಂದು. ಮಧ್ಯರಾತ್ರಿಗೆ ವಜ್ರಧರ್ಮ ಅವನನ್ನು ಜೋರಾಗಿ ಮೈಕುಲುಕಿ ಎಬ್ಬಿಸಿದ. 'ಸಮಾಧಿಗೆ ಏರಬಾರದೇ? ಈ ನರಕ ಯಾತನೆ, ಹುಚ್ಚುಜ್ವರ, ಯಾಕೆ? ಚೇತನವನ್ನು ಕುಂಡಾಲಿನಿಯಲ್ಲಿರಿಸಿ ಸಮಾಧಿಗೇರಿ' ಎಂದ. ಗುರುವಿಗೂ ಹೌದೆನ್ನಿಸಿತು. ಮನಸ್ಸನ್ನು ಸ್ತಿಮಿತಕ್ಕೆ ತಂದಿಟ್ಟು ಧ್ಯಾನಿಸಿ, ಸಮಾಧಿಗೆ ಹೋಗಲು ಯತ್ನಿಸಿದ. ಆಗಲಿಲ್ಲ. ಕ್ಷಣಕ್ಷಣಕ್ಕೂ ಭಂಗವಾಗಿ 'ಸರ್ವನಾಶವಾಯಿತು! ...ನನ್ನ ತಪೋಬಲ! ಬ್ರಹ್ಮತೇಜಸ್ಸು! .... ತಪೋಬಲ ಹೋಯಿತು . . ಜನ್ಮಾವಧಿಯ ನಿಧಿ ...'

ಎಂದು ಅಳುತ್ತಿದ್ದ. ಆ ಕೃತ್ಯದ ನಾಚಿಕೆ, ಪಶ್ಚಾತ್ತಾಪ, ಮನಸ್ಸನ್ನು ಕಚ್ಚಿ, ಕೊಯಿದು, ಹಿಂಸಿಸಿ, ಪೀಡಿಸಿ, ಗೋಳಾಡಿಸುತ್ತಿತ್ತು. ಈ ಪಶ್ಚಾತ್ತಾಪ, ನಾಚಿಕೆಗಳ ಪೀಡೆಯಲ್ಲಿ, ಸಮಾಧಿಗೆ ಬೇಕಿದ್ದ, ಶಾಂತಿ, ಸ್ತಿಮಿತ ಇರಲಿಲ್ಲ. ಒಮ್ಮೆ ಒಂದು ಕ್ಷಣ, ಶಾಂತಿಯ ಆಶೆ ಮುಖದಲ್ಲಿ ಮೂಡಿತು. ದೈನ್ಯದಿಂದ, ಆಸೆಯಿಂದ ಕಣ್ಣಲ್ಲಿ ಪ್ರಾಣವನ್ನು ತುಂಬಿ, ತಿರುಕನ ದೃಷ್ಟಿಯಿಂದ ಪಟ್ಟಶಿಷ್ಯ ವಜ್ರಧರ್ಮನ ಕಡೆಗೆ ನೋಡಿ ಅವನ ಕೈಯನ್ನು ತನ್ನ ಕೆಂಡ ದಂಥ, ಸುಡುವ, ನಡುಗುವ ಕೈಗಳಲ್ಲಿ ಹಿಡಿದುಕೊಂಡು 'ವತ್ಸ, ನಾನು ಮಾಡಿದುದು ಘೋರ ಪಾಪವೇ?" ಎಂದು ನರಳಿದ

ವಜ್ರಧರ್ಮನ ಮುಖ ಕಬ್ಬಿಣದಿಂದ ಮಾಡಿದಂತೆ ಇತ್ತು. ಮುಚ್ಚಿದ ತುಟಿಗಳ ಎಡೆಯಿಂದ ಸ್ಪಷ್ಟವಾಗಿ, ತೀಕ್ಷ್ಣವಾಗಿ, ಈಟಿಯ ತಿವಿತದಂತೆ 'ಹೌದು ಘೋರಪಾಪ' ಎಂದ.

ಮುಮೂರ್ಷುವಿನ ಮುಖದ ಆಶೆಯ ಕಿರಣ, ಶಾಂತಿಯ ನೆರಳು, ಹಾರಿಹೋಯಿತು. ಪುನಃ ಜ್ವರದ ಉದ್ರೇಕ, ಹುಚ್ಚುಹುಚ್ಚು ಮಾತು. ಭ್ರಾಂತಿ, 'ಸರ್ವನಾಶ ... ..ತಪೋಬಲ . . ..' ಎಂಬ ಅಳು; ಸಮಾಧಿಗೇ ರಲು ಕ್ಷಣಕ್ಷಣಕ್ಕೂ ವಿಫಲಪ್ರಯತ್ನ.

ನೋಡಿ, ಅಸಹ್ಯವಾಗಿ, ವಜ್ರಧರ್ಮ ಮುಖ ಕಹಿಮಾಡಿಕೊಂಡು, ಹೊರಗೆ ಮುಖತಿರುವಿ ಹೋದ. ಪುಷ್ಪಧರ್ಮ ಆತ ಹೋಗುವುದನ್ನೇ ಕಾದುಕೊಂಡಿದ್ದವನಂತೆ ಇದ್ದವನು, ಮೆಲ್ಲನೆ ಗುರುವಿನೆಡಗೆ ಬಗ್ಗಿ, ಮೃದು ವಾಗಿ ಮೈಕುಲುಕಿ ಎಬ್ಬಿಸಿದ. ಬಗ್ಗಿ, 'ಗುರುದೇವ' ಎಂದ. ಬಡಸನ್ಯಾಸಿ ಯಾತನೆಕೂಡಿದ ಕಣ್ಣು ತೆರೆದ: 'ಗುರುದೇವ; ನೀನು ಮಾಡಿದ್ದು ಘೋರ ಪಾಪ ಹೌದು. ಆದರೆ ಗುರುವೇ, ನಾನೂ ಮಾಡಿದ್ದೇನೆ.. ..'

ಗುರು ಹತಾಶನಾಗಿ ಜಡವಾಗಿ ನೋಡುತ್ತಿದ್ದ.

'ಮತ್ತೆ ಗುರುದೇವ, ನೀವು ನಂಬಲಾರಿರಿ. ಆದರೆ ಇದ್ದುದನ್ನು ಹೇಳುತ್ತೇನೆ: ವಜ್ರಧರ್ಮನೂ ಅದೇ ಪಾಪವನ್ನು ಮಾಡಿದ್ದಾನೆ. ....... ಇದೇ ಕಣ್ಣಲ್ಲಿ ನಾನು ನೋಡಿದ್ದೇನೆ ... ...ದಸ್ಯುಯುವತಿ .......ಗಂಡಕಿ ಯಲ್ಲಿ ಈಜುತ್ತಿದ್ದಳು ... ...' ವೃಷಲ ಬಾಯಿತೆರೆದು ಬೆರಗಾಗಿ, ಕಣ್ಣು ತೆರೆದ. ಮುಖದಲ್ಲಿ ಪ್ರಶ್ನೆ?

ಗುರುವಿನ ಕಣ್ಣಲ್ಲಿ ಆಸೆಯ ಹಣತೆ ಉರಿಯಿತು: 'ಸತ್ಯವೇ, ವತ್ಸಾ? ಇರದು.... ...ವಜ್ರಧರ್ಮ ಎಂದೂ .. ..'

'ನನ್ನಾಣೆ,! ನನ್ನ ಧರ್ಮದಾಣೆ,! ನನ್ನ ಸಾಧನೆಯಾಣೆ! ... ...ಗುರುದೇವ; ಈ ಪಾಪವನ್ನು ಮಾಡದ ಜಂತು ಸೃಷ್ಟಿಯಲ್ಲಿಲ್ಲ ... ...ನೀವು ನಿಶ್ಚಿಂತರಾಗಿ ಸಮಾಧಿಗೇರಿ.'

ಗುರುವಿನ ಮುಖದಲ್ಲಿದ್ದ ಭಯಪಿಶಾಚ ಓಡಿಹೋಯಿತು. ಒಂದು ಕ್ಷಣ ಕಣ್ಣುತೆರೆದು ಶಾಂತಿಯ ನಿಟ್ಟುಸಿರುಬಿಟ್ಟ. ಮತ್ತೆ, ಎರಡು ಕ್ಷಣದಲ್ಲೇ ಸಮಾಧಿ ಸ್ಥಿತಿಯಲ್ಲಿದ್ದ. ಪ್ರಾತಃಕಾಲದವರೆಗೂ ಶಾಂತಿಸಮಾಧಿಯಲ್ಲಿದ್ದು ಸುಖವಾಗಿ ಪ್ರಾಣಬಿಟ್ಟ.

ಗುರುವಿನ ಪ್ರಾಣ ಬಿಡುವುದರೊಳಗೇ, ವೃಷಲ ಹಲ್ಲುಕಿರಿದು ಓಡಿ, ವಜ್ರಧರ್ಮನೊಡನೆ ಕೇಳಿದ್ದ: 'ಹೌದೇ ? ಗಂಡಕಿಯಲ್ಲಿ ಈಜುತ್ತಿದ್ದಳೇ? ದುಸ್ಸ್ತ್ರೀ ?.......'

ವಜ್ರಧರ್ಮನ ಕಣ್ಣು ಕಿಡಿಹಾರಿಸಿತು ಪುಷ್ಪಧರ್ಮನನ್ನು ನಿಷ್ಠುರವಾಗಿ ಕರೆದ. ಅವನ ರಟ್ಟೆಗಳೆರಡನ್ನೂ ಹಿಡಿದು ಅಲುಗಿಸಿ, 'ಪ್ರಮಾಣಮಾಡು ಪಾಖಂಡಿ. ನೀನು ಹೇಳಿದುದು ಸತ್ಯವೋ ?'

'ಶುದ್ಧ ಸುಳ್ಳು!' ಪುಷ್ಪಧರ್ಮ ನಸುನಕ್ಕ 'ಸತ್ಯವ್ರತ ನೀನು.! ನಾನಲ್ಲ.'

ಅವನ ಮುಖವನ್ನು ವಜ್ರಧರ್ಮ ಆ ಕ್ಷಣಾನಂತರ ನೋಡಲಿಲ್ಲ.

\+ + + + + +

ಒಂದರವತ್ತು ವರುಷಕಾಲಾನಂತರ ಮೂವರು ಶಿಷ್ಯರದೂ ಜೀವನಲೀಲೆ ಮುಗಿಯಿತು. ವಜ್ರಧರ್ಮ ಮಾನಸಸರೋವರದಲ್ಲಿ ಅಖಂಡ ತಪಸ್ಯಾನಂತರ, ರಕ್ತವೂ ನೀರಿನಂತೆ ಗಡ್ಡೆಕಟ್ಟಿ, ಕಲ್ಲಾಗಿ ಮೋಕ್ಷಪಡೆದ. ಪುಷ್ಪಧರ್ಮ ಶಾಕ್ಯಪುರದಲ್ಲಿ, ಅಂತಃಪುರಿದಲ್ಲಿ, ಭಿಕ್ಷಾರೂಪವಾಗಿ ಪಡೆದ ಭಕ್ಷ್ಯಭೋಜ್ಯ ಪಾಯಸಾದಿಗಳನ್ನೂ ಸುಖ ವಿಶೇಷಗಳನ್ನೂ ಸೇವಿಸಿ, ಜೀರ್ಣಕೆಟ್ಟು ಆಮಶಂಕೆಯಿಂದ ಸತ್ತೇಹೋದ ವೃಷಲ ಹೇಗೋ ಸತ್ತ.

\+ + + + + +

ಸ್ವರ್ಗಲೋಕದ ಸೂರ್ಯ ಚಂದ್ರ ಪ್ರಭಾನ್ವಿತ ಮಹಾದ್ವಾರದಲ್ಲಿ ಯಮಧರ್ಮ ಮುದಿಕೋಣದ ಮೇಲೆ ಆರೂಢನಾಗಿ ಸಹಾಧ್ಯಾಯಿಗಳು ಮೂವರನ್ನೂ ಎದಿರುಗೊಂಡ ವಜ್ರಧರ್ಮನನ್ನು ಕಂಡಕೂಡಲೇ, ಕೋಣನ ಬೆನ್ನಿಂದ ನೆಗೆದು, ಕೈಹಿಡಿದು, ಬಹೂಪಚಾರದಿಂದ 'ಕುಶಲವೇ ? ಸುಕ್ಷೇಮವಾ ಮುನಿವರಾ ?' ಎಂದು ಪ್ರಶ್ನಿಸಿ, ಶೋಢಷೋಪಚಾರವಂ ಗೈದು, ಇಂದ್ರಪುರಿಗೆ ಪ್ರವೇಶವಂ ಮಾಡಿಸಿದ. ಕಾಂಚನರಥದಲ್ಲಿ ಕುಳ್ಳಿರಿಸಿ, ಆ ಸುರಸುಖ— ಸೌಭಾಗ್ಯ—ಸಮಾರೋಹದಿಂದ ಅಲ್ಲೋಲಕಲ್ಲೋಲವಾಗಿ, ಕಿನ್ನರ–ಗಂಧರ್ವ–ಗಾನತರಂಗಗಳಿಂದ ನರ್ತಿತ–ಪುಳಕಿತ, ಮೈದಾನು–ಬೀಚುಗಳನ್ನೂ, ಪಬ್ಲಿಕ್ ಪಾರ್ಕುಗಳನ್ನೂ, *ಅಪ್ಸರೆಯರ 'ನಾಚು—ಮಹಲ್'ಗಳ ಸುರಸೌಧಗಳನ್ನೂ, ಉಡುಪಿ ಬ್ರಾಹ್ಮಣರ ಅಮೃತದ ರೆಸ್ಟೋರೆಂಟುಗಳನ್ನೂ ದಾಂಟಿ,....ಮುಂದೆ ಸಾರಿ,....ಯೋಜನ ದೂರ ಧಾವಿಸಿ... ...ವಿಜನವೂ, ಸ್ವರಹಿತವೂ ಆದ ಬಟ್ಟಂಬಯಲೊಂದಕ್ಕೆ ಕೊಂಡುಹೋದನು.

ಅಲ್ಲಿ ಒಂದು ದೊಡ್ಡ ಮಂಜುಗಡ್ಡೆ ಕಪಾಟು (ಫ್ರಿಜಿಡ್–ಎಯರ್) ನಿಲ್ಲಿಸಿತ್ತು. ಅದರೊಳಗೆ ಸಂಭ್ರಮದಿಂದ ಕುಳ್ಳಿರಿಸಿ, ವಿನಯವಂ ಗೈದು, ಡಿ. ಡಿ. ಟಿ. (D D T.) ಪೊಟ್ಯಾಶಿಯಂ ಪರ್ಮೆಂಗನೇಟ್ ಆದಿ, ಕ್ರಿಮಿನಾಶಕ ದ್ರವಂಗಳಿಂದ ಸೇಚಿಸಿ, ಕಪಾಟನೊಳಗೆಲ್ಲಾ ನಪ್ತಾಲಿನ್ ಕ್ರಿಮಿನಾಶಕಗಳನ್ನು ತುಂಬಿಸಿ ವೆಕ್ಯುಮ್ ಪಂಪಿನಿಂದ ಗಾಳಿಯನ್ನೆಲ್ಲಾ ಓಡಿಸಿ, ಪುನಃ ವಿನಯದಿಂದ ನಮಿಸಿ, ಆಶೀರ್ವಚನವಂ ಪಡೆದು, ಬಾಗಿಲನ್ನು ಮುಚ್ಚಿ ಭದ್ರಪಡಿಸಿ, ಸ್ವರ್ಣದಿಂದ ರಂಧ್ರಗಳಿಗೆಲ್ಲಾ ಬೆಸಿಗೆ ಹಾಕಿ, ಬಾಗಿಲ ಸಂದಿಗೆ ಕರಗಿಸಿದ ಚಿನ್ನ ತುಂಬಿಸಿ, ಹೊರಗೆ ಪುನಃ ಕ್ರಿಮಿನಾಶಕ ಔಷಧಗಳನ್ನು ಚುಮುಕಿಸಿದನು. ಹೊರಗೆ ಜ್ಯೋತಿರ್ಮಾನವಾದ ಸುವರ್ಣದ ತಗಡನ್ನು ಹೊದ್ದಿಸಿ, ಮೇಲೆ ವಜ್ರಾಕ್ಷರಗಳಲ್ಲಿ 'ಸತ್ಯಮೇವ ಜಯತೇ ನಾನೃತಂ' ಎಂದು ಕಣ್ಣು ಕೋರೈಸುವ ಹಾಗೆ ಕೆತ್ತಿಸಿ, ಕೆಳಗೆ 'ವಜ್ರಧರ್ಮ'

---

* ಇದೇನು ಅಸಂಬದ್ಧ ಅನ್ನಬೇಡಿ. ದೇವತೆಗಳು ತ್ರಿಕಾಲಿಗಳು. ಅವರಿಗೆ ಭೂತ ಭವಿಷ್ಯ ಎಂದು ಬೇರೆ ಇದೆಯೆ ?

ಎಂದು ಕಡೆಯುವ ಕಲ್ಲಿನಗಾತ್ರದ ವಜ್ರಗಳಲ್ಲಿ ಬರೆಸಿದನು. ಅಗತ್ಯವೇನೂ ಇಲ್ಲದಿದ್ದರೂ, 'ಯಾರೂ ಒಳಗೆ ಪ್ರವೇಶಿಸಬಾರದು' ಎಂದು ಅಂಕಿತ ಬೇರೆ! ತದನಂತರ ಗಂಧಕರ್ಪೂರ, ಊದುಬತ್ತಿ, ಜವ್ವಾಜಿಗಳನ್ನುರಿಸಿ ಕೈಜೋಡಿಸಿ, ಹಿಂದೆ ಹಿಂದೆ ಸರಿಯುತ್ತಾ, ಹೊರಟುಹೋದ. ಆ ಸತ್ಯಸ್ವರ್ಗದಲ್ಲಿದ್ದುದು ಇನ್ನೊಂದೇ ಒಂದು ಇಂತಹದೇ, ಫ್ರಿಜಿಡೆಯರ್–ವ್ಯಾಕ್ಯೂಮ್–ಡಿಡಿಟಿ–ಸತ್ಯಸ್ವರ್ಗ ಗರ್ಭಗುಡಿ. ಅದು ಬರೇ ಬೆಳ್ಳಿಯ ತಗಡಿಂದ ಮುಚ್ಚಲ್ಪಟ್ಟಿತ್ತು. ಮೇಲೆ 'ಎಸ್. ಹರಿಶ್ಚಂದ್ರನ್' ಎಂದು ಬರೇ ಸುವರ್ಣಾಕ್ಷರದಲ್ಲಿ ವಿಜಿಟಿಂಗ್ ಕಾರ್ಡ್ ನಿಲ್ಲಿಸಲ್ಪಟ್ಟಿತ್ತು.

ಯಮಧರ್ಮ ಹೊರಡುತ್ತಲೇ ಕಿನ್ನರ ಗಂಧರ್ವರ ಸಹಸ್ರ ಕಂಠಗಳಿಂದ ಮಂಜುಳ ಜಯಜಯಕಾರ, ಸ್ತುತಿಗಾನಗಳು ಭೋರ್ಗರೆದು ತರತರಂಗಿತವಾಗಿ, ಇಂದ್ರಲೋಕವಂ ಪುಳಕಿತಗೈಯುತ್ತಿರಲು, "ಆಕಾಶವಾಣಿ"ಯಿಂದ ಜಯಕೀರ್ತನೆ ಹೊರಹೊಮ್ಮುತ್ತಿರಲು, ಇಂದ್ರಾದಿ ದೇವರ್ಕಳು, ಪುಷ್ಪಕಾವಿಮಾನದಲ್ಲಿ ನಭೋಮಂಡಲದಲ್ಲಿ ಸಂಚರಿಸುತ್ತಾ, ಪುಷ್ಪವೃಷ್ಟಿಯಂ ಮಾಡಿದರೆನೆ, ಸುರಲೋಕ, "ಸತ್ಯಮೇವ ಜಯತೇ" ಎಂಬ ಜಯಜಯೋದ್ಗಾರದಿಂದ ಗುಂಜಿತವಾಯಿತು.

ಇಷ್ಟೆಲ್ಲಾ ವಿಜೃಂಭಣೆ ಆಗಿ, ಯಮಧರ್ಮ ಪುನಃ ಸ್ವರ್ಗದ್ವಾರಕೆ ಮರಳುವಾಗ ನಡುಹಗಲು ಗಂಟೆ ಹನ್ನೆರಡು. ಬಡಪಾಯಿಗಳು ಪುಷ್ಪಧರ್ಮ, ವೃಷಲ, ಬಿಸಿಲು ಹಣ್ಣು ಸವಿಯುತ್ತಾ ಬೆಂಡಾಗಿ ನಿಂತಿದ್ದರ್ಕು ಹೊರಗೇನೆ. ಪುಷ್ಪಧರ್ಮನಾದರೋ ದ್ವಾರದ ಸಂದಿಯಿಂದ ಇಣಿಕಿ ಅಪ್ಸರೆಯರ ಕಡೆಗೆ ಕಣ್ಣು ಹಾಕುತ್ತಾ ಉಲ್ಲಾಸದಲ್ಲೇ ಇದ್ದ ಅನ್ನಿ. ಬಡಪಾಯಿ ವೃಷಲ ಮಾತ್ರ ಹೊಟ್ಟೆಯ ಜ್ವಾಲೆಯಿಂದ ಉರಿದು ಗಡ್ಡೆಗೆಣಸಿಗಾಗಿ, ಆ ಸ್ವರ್ಗಸೋಪಾನದ ಸ್ಫಟಿಕ ಶಿಲೆಯನ್ನು ಕೆರೆದು ಕೆರೆದು ಬಳಲಿದ್ದ ಪಾಪ !

ಯಮಧರ್ಮ ಪುಷ್ಪಧರ್ಮನನ್ನು ನೋಡಿ, "ಓಹೋ!" ಎಂದು ಗಹಗಹಿಸಿ ನಕ್ಕ........"ಶುದ್ಧ ಸುಳ್ಳಿನ ಅವತಾರ! ಹಹ್ಹಹ್ಹಾ!........

ಎಲ್ರೋ, ಯಾರಲ್ಲಿ? ಈ ಕೊಳಕಮುಂಡೇಗಂಡನ್ನ ಆ ರಂಭೇ ಊರ್ವಶಿಯರ ಮನೇ ಹಿಂದಿನ ಆ ಮಲ್ಲಿಗೇದೋಟದಲ್ಲಿ ಒಂದು ಗುಡಿಸಲು ಕಟ್ಟಿಸಿ ಕೂಡ್ರಿಸ್ರೋ........" ಎಂದು ದೂತರಿಗೆ ಆಜ್ಞಾಸಿಸಿದ.

ಆಮೇಲೆ ವೃಷಲನನ್ನು ನೋಡಿ, ಉಂಗುಷ್ಟದಿಂದ ನೆತ್ತಿಯವರೆಗೂ ನಡುಗುತ್ತಿದ್ದ ಆ ದೇಹವನ್ನು ದಿಟ್ಟಿಸಿ, ತಲೇ ತುರಿಸಿಕೊಂಡು: "ಎಲಾ! ಇವನ!" ಎಂದುಕೊಂಡು, ಚಿತ್ರಗುಪ್ತರಂ ಕರೆಸಿ, ದಫ್ತರ ಬಿಚ್ಚಿ ನೋಡಿ: "ಎಲಾ, ಮೊದ್ದೇ! ನಿನಗ್ಯಾರೋ ಇಲ್ಲಿ ಬಾ ಅಂತ ಅಂದರು? ನಡಿ; ಪುನಃ ವೃಷಲನಾಗಿ ಹುಟ್ಟು" ಎಂದು ಅಬ್ಬರಿಸಿ ಕಳಿಸಿದನೆಂಬಲ್ಲಿಗೆ ಸತ್ಯಮೇವ ಜಯತೇ ಎಂಬ ಬೋಧಪ್ರದವಾದ ಕಥೆ ಪರಿಸಮಾಪ್ತವಾದುದು.

ಓಂ! ಶಾಂತಿಃ ಶಾಂತಿಃ

*"My dear friend, Please, do not be just Be simply kind"*

---Anatole France

---

# ಅಜ್ಜ ನೆಟ್ಟ ಮರ

ನಮ್ಮ ಶೇವಂತಿಗೋಡಿನಲ್ಲಿ, ಅತಿ ಪ್ರಾಚೀನವಾದುದು ಏನೆಂದು ಕೇಳಿದರೆ, ಉತ್ತರ ಸಿಗುವುದು ಮೂರು: ಬಲವಾಂಡಿದ್ಯೆವ* ಸಂಪಿಗೆ ರಾಯರ ಮನೆತನ ಮತ್ತು ಅವರ ಮನೇ ಎದುರಿನ ಮಾವಿನ ಮರ.

ಅಬ್ಬಾ! ಆ ಮರವೇ! ದೊಡ್ಡ ಭೀಮಸೇನನ ಹಾಗೆ—ಭೇತಾಳನ ಹಾಗೆ ಅಲ್ಲ—ಶೋಭೆಯಿಂದ, ಮುಕುಟಧಾರಿಯಾಗಿ, ವಿಶಾಲವಾಗಿ, ಬೃಹದಾಕೃತಿಯಿಂದ, ಸಂಪಿಗೆರಾಯರ ಮಾಳಿಗೆಮನೆಯನ್ನು ಕೋಳಿ ಗೂಡಿನ ಹಾಗೆ ತೋರುವಂತೆ ಮಾಡಿ, ಮೋಡಗಳ ಮೇಲೆ ಗದಾಪ್ರಹಾರ ಮಾಡುತ್ತಿತ್ತು. ಮಾವಿನ ಮರಗಳು ಇಂಥಾ ಭವ್ಯಾಕಾರ ತಾಳುವುದು ಪುತ್ತೂರು ಕಡೆ ಮಾತ್ರ. ಒಂದು ಮಹಾನ್ ರಥದಂತೆ, ಆಕಾಶದವರೆಗೂ ಚಾಚಿ, ಗಂಭೀರವಾಗಿತ್ತು. ಎದುರಿನಿಂದ ಸಂಪಿಗೆರಾಯರ ಮನೆಯೇ ಕಾಣಿಸುತ್ತಿರಲಿಲ್ಲ ಇದರ ಬೃಹದಾಕೃತಿಯಿಂದ.

ಇದು, ಯಾರೋ ಒಬ್ಬ ಪುರಾತನ ಸಂಪಿಗೆರಾಯರು ನೆಟ್ಟ ಮರ ವಂತೆ. ಪ್ರಾಯಕ್ಕೆ ಅವರ ಮನೆತನಕ್ಕಿಂತ ಒಂದಿಷ್ಟು ಮಾತ್ರ ಅದು ಕಿರಿದು. ಆ ಮರದಲ್ಲಿ, ಒಂದು ಸಾವಿರ ಬಾವಲಿ (ಗಬ್ಬಿಲ), ಹತ್ತುಸಾವಿರ ಕಾಗೆ; ರಾತ್ರಿ ಇಡೀ ತಾಳ ಮದ್ದಲೆ (ಯಕ್ಷಗಾನ) ನಡೆಸುವ ಚಿತ್ರ ವಿಚಿತ್ರ ಕ್ರಿಮಿ ಕೀಟ, ಪತಂಗಕೋಟಿ ಆ ಮರದಿಂದ ಸಂಪಿಗೆರಾಯರಿಗೆ ಲಭ್ಯ ಎಂದರೆ—ಅಕ್ಷಯ ಹಣ್ಣೆಲೆ; ಬೇಕೆಂದೇ ಎಂಬಂತೆ, ಹಠತೊಟ್ಟು, ತಲೆಗೇ ಬಿದ್ದು ಎರಗುವ ಒಣ ರೆಂಬೆಗಳು ವರುಷಕ್ಕೊಂದುಗಾಡಿ; ಹಕ್ಕಿಗಳ ಹಿಕ್ಕೆಯ ಒಂದು ಮೇರು ಪರ್ವತ; ಅಂಗಳದಲ್ಲೆಲ್ಲಾ ಕ್ಷಯರೋಗಿಯ ಎಲುಬು ಗೂಡಿನಂತೆಯೇ, ಕೃಶಮನುಷ್ಯನ ತೋಳಿನ ರಕ್ತನಾಳಗಳಂತೆಯೇ, ಇಡೀ ಅಂಗಳ ಹರಡಿಕೊಂಡ ದಪ್ಪನಾದ ಬೇರುಗಳ ಜಾಲ ಅಷ್ಟೆ. ಹೂ, ಕಾಯಿ, ಹಣ್ಣು ಬಿಡುವ ಸಂಪ್ರದಾಯವನ್ನು ಬಿಟ್ಟು ಎಷ್ಟು ವರ್ಷವಾಯಿತೋ

---

* ತುಳು ನಾಡಿನ ಹೊರಗೆ 'ದೆವ್ವ' ಎಂದು ಅನ್ನಿಸಿಕೊಳ್ಳುವ ಭೂತ ರಾಜರಲ್ಲೊಬ್ಬ.

ಏನೋ? ಹಳೆಯ ಕಣ್ಣು ಕಾಣಿಸದ ಮುತ್ತಜ್ಜಿ ಒಬ್ಬರಿಗೆ ಮಾತ್ರ ಆ ಮರದ ಹಣ್ಣಿನ ಹಣ್ಣು-ಚಟ್ಟು, ಎಂದೋ ಮಾಡಿಟ್ಟು ಒಳಗೆ ಶೇಖರಿಸಿ ದುದರ ತುಣುಕು ತಿಂದ ಜ್ಞಾಪಕ ಉಂಟಂತೆ. ಆ ಯುಗ—ಪ್ರಾಚೀನ ಹಣ್ಣು-ಚಟ್ಟನಲ್ಲಿ ಮುತ್ತಿಕೊಂಡಿದ್ದ, ಹುಳುಗಳ ಅಕ್ಷೋಹಿಣಿಯನ್ನು, ಕುರಿತು, ಗುಬ್ಬಚ್ಚಿ, ವಿಹಂಗಮಿ, ವಿಹಂಗಮು ಕತೆ ಹೇಳುವ ಎಡೆಯಲ್ಲಿ ಆಗಾಗ್ಯೆ ಹೇಳುತ್ತಿದ್ದರು, ತಮ್ಮ ಹಲ್ಲಿಲ್ಲದ ಬೊಕ್ಕು ಬಾಯಿ ಬಿರಿದು, ವಿಶ್ವರೂಪದ ದರ್ಶನಮಾಡಿಸುತ್ತಾ.

ಹಣ್ಣು ಆಗದಿದ್ದರೇನು? ಬಂಜೆಮರವಾದರೇನು? ಹಣ್ಣಿಗೆ ಊರಲ್ಲಿ ಕಡಿಮೆಯೇನು? ಇದೋ ಅಜ್ಜ ನೆಟ್ಟ ಮರ! —ಅಂದರೆ, ಯಾವ ಪೀಳಿಗೆಯ ಸಂಪಿಗೆರಾಯರ ಅಜ್ಜ ನೆಟ್ಟಿದ್ದೋ ಏನೋ! ಈಗಿನವರ ಅಜ್ಜನೂ ಅದನ್ನು ಅಜ್ಜ ನೆಟ್ಟ ಮರವೆಂದೇ ಕರೆಯುತ್ತಿದ್ದರಂತೆ. ಇದೊಂದು ಮರ, ಸಂಪಿಗೆ ರಾಯರ ಮನೆತನದ ಪುರಾತನ ಪ್ರತಿಷ್ಠೆಯ ಮಾನಸ್ಥಂಭ—ಮಂಜಪ್ಪ ಹೆಗ್ಗಡೆಯ ಮನೆಯಲ್ಲಿ ಅಗೋಳಿ ಮಂಜಣ † ಊಟಕ್ಕೆ ಕೂರುತ್ತಿದ್ದ ಮಣೆ ಈಗಲೂ ಇದೆ. ಅಬ್ಬಾ! ಬಕಾಸುರನ ನೆನಪಾಗುತ್ತದೆ. ಬುಡಾನ್ ಸಾಹೇಬ ನಲ್ಲಿ, ಆ ತುರುಕರ ಮಕಾನ್ ತಳ ಊರಲು, ಚೆನ್ನಮ್ಮಾಜಿರಾಣಿ ಅನು ಮತಿ ಕೊಟ್ಟ ತಾಳೆ ಓಲೆಯ ಶಾಸನವುಂಟು ಅವನ್ನೆಲ್ಲಾ ಕಾಣಬೇಕಾಗಿ ದ್ದರೆ, ಒಳಗೆ ಹೋಗಿ ಹಿಣಿಕಬೇಕು. ನಮ್ಮ ಸಂಪಿಗೆರಾಯರ ಕೀರ್ತಿಧ್ವಜ ಮಾತ್ರ ಎದುರಿಗೇ ಗೋಪುಟನಂತೆ ನಿಂತಿದೆ.

ಮನೆಯ ಮಕ್ಕಳೆಲ್ಲಾ, ಮರದ ಅಡಿ, ಮರದ ಮೇಲೆ, ತುದಿಯಲ್ಲಿ, ಸಂದಿಯಲ್ಲಿ, ಪೊಟರೆಯೊಳಗೆ, ಮೂಡುತ್ತಿದ್ದ ಕಪಿಮುಷ್ಟಿಗೆ ಕೊನೆ ಮಿತಿ ಯಿಲ್ಲ. ಮಗು ಶ್ರೀನಿವಾಸ ಓದುವುದು, ಬೆಲ್ಲವೊ ಉಂಡೆಯೊ ತಿನ್ನುವುದು, ಪದ ಕಿರಿಚುವುದು, ಸಿಟ್ಟಾದರೆ "ಕೋಪದ ಮನೆಯಾಗಿ" ಮಾಡಿಕೊಂಡು ಅಜ್ಞಾತವಾಸ ಮಾಡುವುದು, ಅನ್ನ ಸತ್ಯಾಗ್ರಹ ಮಾಡುವುದು, ತಪಸ್ಸು ಮಾಡುವುದು ಎಲ್ಲಾ ಮರದ ಕೊಂಬೆಯ ಸಂದಿಯಲ್ಲಿಯೇ. "ಶ್ರೀನಿವಾಸಾ" ಎಂದು ಕೂಗಿದರೆ, 'ಓ' ಕೊಡುವುದು, ಕಾಗೆಗಳ ಗೂಡುಗಳ ನಡುವಿನಿಂದ. 'ಓ' ಉತ್ತರ ಬರದಿದ್ದರಂತೂ,-ಅಲ್ಲೆಲ್ಲೋ ಮರದಮೇಲೆ ಬುಸುಗುಟ್ಟುತ್ತಾ,

† ಅಗೋಳಿಮಂಜಣ = ತುಳುನಾಡಿನ ಇತಿಹಾಸ ಪ್ರಸಿದ್ಧ ಅದ್ಭುತ ಪುರುಷ.

ಮೌನಾಗ್ರಹವನ್ನೋ ಅನ್ನಸತ್ಯಾಗ್ರಹವನ್ನೋ ಮಾಡುತ್ತಾ ಇದ್ದಾನೆಂದು ಅರ್ಥ. ಈ ಒಬ್ಬನೇ ಮಗನಿಗೆ ಮರ ಹತ್ತಬೇಡಾ ಎಂದು ಅರಚಿ, ಅರಚಿ, ಅಪ್ಪ—ಅಮ್ಮನ ಗಂಟಲ ಪಸೆ ಆರುವುದು.ಈ ಕಪಿಯನ್ನು ಹೆಡೆಮುರಿ ಕಟ್ಟಿ ತರಲು, ಅಮ್ಮನೂ, ಸಂಪಿಗೆರಾಯರೂ, ಸ್ವತಃ ಎಷ್ಟೋ ಬಾರಿ, ತಮ್ಮ ಪ್ರಾಯ, ಸ್ಥಿತಿಗಳನ್ನು ಮರೆತು, ಮರಹತ್ತಿ ಸರ್ಕಸ್ ಮಾಡಬೇಕಾಗುತ್ತಿತ್ತು.

ಯುದ್ಧದ ಸಮಯ: ಮಲೆಯಾಳಿ ಮೇಸ್ತ್ರಿ ಕಣ್ಣ, ಸಂಪಗೆರಾಯರಲ್ಲಿಗೆ ಏನೋ ಹಾರೆಗಾಗಿಯೋ, ಸಬಳಕ್ಕಾಗಿಯೋ ಬಂದ. ಈ ಮರವನ್ನು ಕಂಡು ಈ ವೃಕ್ಷಘಾತಕ ವಿಶ್ವಕರ್ಮನ ಬಾಯಿ ನೀರೂರಿತು: "ಏನ್ ಸ್ವಾಮಿ; ಈ ಮರಾ ಹೆಂಗೆ ಉಂಡು? ಭೇತಾಳ ಮಾದ್ರಿ.... .......ಕಡಿದರೆ ಒಂದು ಮಾಳಿಗೆ ಮನೆಗೆ ಬೇಕಷ್ಟು ಮೋಪು ಆದೀತು" ಅಂದ. ಊರವರು ಯಾರೂ ಹತ್ತಿರ ಇರಲಿಲ್ಲ. ಇದ್ದಿದ್ದರೆ "ತೊಲಗೋ ಭ್ರಷ್ಟ" ಅನ್ನುತ್ತಿದ್ದರೋ ಏನೋ. ಸಂಪಿಗೆರಾಯರ ಹೆಂಡತಿ, ಅವನಿಗೆ ಬೆಲ್ಲ—ನೀರು ಕೊಡ ಬಂದವರು, ಚೊಂಬನ್ನು ಜೋರಾಗಿ ದುಡುಕಿನಿಂದ ಕುಕ್ಕರಿಸಿದರು. "ಥೂ. ಏನು ಅವಲಕ್ಷಣಮಾತನಾಡ್ತೋದೋ! ಅದು ಅಜ್ಜ ನಟ್ಟ ಮರ." ಅಲ್ಲೇ ಆಡುತ್ತಿದ್ದ ಹುಡುಗ ಶ್ರೀನಿವಾಸನಿಗೆ ಆವೇಶವೇ ಬಂದಂತೆ ಆಯಿತು. ಅಲ್ಲಿಂದಲೇ ಚೆನ್ನಾಗಿ ಬೈದೇ ಬಿಟ್ಟ. "ನೀರೇ ಕೊಡಬಾರದು. ಅಜ್ಜನ ಮರವನ್ನು ಕಡಿಯುವುದಂತೆ!" ಎಂದು ಆರ್ಭಟಿಸಿದ. ಸಂಪಿಗೆರಾಯರು ಮಾತ್ರ, ಸುಮ್ಮನೇ ನೋಡಿದರು.

ಕಣ್ಣ ಮೇಸ್ತ್ರಿ ಹತ್ತಿರವೇ ಎರಡು ಮೂರು ಕಡೆ ಮನೆಕಟ್ಟುತ್ತಿದ್ದ. ಮರವನ್ನು ದೂರದಿಂದ,– ಅಂದರೆ ಮಂಗಳೂರಿಂದ– ಬಂದರದಲ್ಲಿ ಚೌಕಾಶಿ ಮಾಡಿ, ಗಾಡಿಯಲ್ಲಿಯೋ, ಲಾರಿಯಲ್ಲೋ ತರಿಸಿ, ಪಡೆಯಬೇಕಿತ್ತು. ಅದರ ಕರ್ಮವೋ, ಮತ್ತೂ ಇದೆ. ಬಂದರದಲ್ಲಿ ಚೌಕಾಶಿ ಮಾಡಿ ಕೊಂಡು ಕೊಂಡ ಮರ ಕಬ್ಬಿಣದಂಥದೋ, ಬಂಗಾರದಂಥದೋ ಆದರೆ, ಇಲ್ಲಿಗೆ ಲಾರಿಯಾತ್ರೆ ಮುಗಿಸಿ ಬರುವುದು ಗೆದ್ದಲುಗಳ ಕೋಟೆ—ಕೊತ್ತಳ. ನಡುವಿನಲ್ಲಿಯೇ ಡ್ರೈವರುಗಳ ದಯೆಯಿಂದ ಎಷ್ಟೋ ರೀಪು—ಹಲಗೆ ಮಟಮಟ ಮಾಯ. ಮೇಲೆ, ಬಂದರದ ವ್ಯಾಪಾರಿ ಬಗುಳಿದ್ದೇ ಬೆಲೆ. ಈ ಯುದ್ಧದ ಸಮಯದಲ್ಲಂತೂ ಬೆಲೆ ಆಕಾಶದಲ್ಲಿದೆ. ಇತಿಮಿತಿ ಇಲ್ಲ.

ಈ ಮರ ನೋಡಿ, ಆ ತೆಂಕಲಾಗಿನವನಿಗೆ ಮೋಹಬಿದ್ದು ಹೋಯಿತು. ಸಂಪಿಗೆರಾಯರನ್ನು ಕಂಡು ಮಾತಾಡಿಸಿದ. “ಸ್ವಾಮಿ ಈಗ ಮರಕ್ಕೆ ಚಿನ್ನದ ದರ ಇದೆ. ಕಡಿಸಿ, ಸಾಗಿಸಿ, ಹಲಗೆ ಮಾಡಿಸುವ ಭಾರ ನನ್ನದು. ನಿಮಗೆ ಪವನಿನ ಬೆಲೆ ಕೊಡಿಸುತ್ತೇನೆ; ಪವನಿನ ಬೆಲೆ” ಎಂದ ಮಾರೀಚ.

ಸಂಪಿಗೆರಾಯರಿಗೆ ಬಿಸಿ ತುಪ್ಪದಂತೆ ಆಯಿತು. ಅಜ್ಜ ನಟ್ಟ ಮರ; ಕಡಿಯುವುದು ಮನಸ್ಸಿಗೆ ಹಿತವಿಲ್ಲ. ಆದರೆ ಹಣ ಯಾರಿಗೆ ಕಹಿಯಾಗುತ್ತದೆ? ಅದೂ ಈ ಹಾಳು ಯುದ್ಧ ಕಳೆದ ನಂತರ, ಜನ್ಮಜನ್ಮಕ್ಕೂ ಆ ನಮೂನೆಯ ದರ ಬರುವಂಥದ್ದೇ ಇಲ್ಲ.

ಇನ್ನೋ, ಆ ಮರದಿಂದ ಒಂದು ಹಾಳು ಕುರುಡು ಕಾಸಿನ ಲಾಭವೂ ಇಲ್ಲ. ಬಾವಲಿಗಳ, ಕಾಗೆಗಳ ಉಪಟಳವೇ ಖಂದ ಸೌಭಾಗ್ಯ.

ಒಂದು ದಿನ, ಯಾರೋ ನೋಡಿ ಹೇಳಿದರು: ಏನು ಲಕ್ಷ್ಮಮ್ಮ? ನಿಮ್ಮ ಮನೇ ತುಳಸಿ ಬಹಳ ಬಡವಾಗಿ ಇದೆಯಲ್ಲಾ?” ಮತ್ತೆ; ಆ ಮರದ ನೆರಳಿನಲ್ಲಿ ಸೂರ್ಯನ ಮುಖ ಕಾಣದೇ ಇದ್ದರೆ, ಎಷ್ಟು ನೀರು ಎರೆದರೂ, ಎಷ್ಟು ನಾರಾಯಣ ನಾರಾಯಣ ಎಂದು ಪ್ರದಕ್ಷಿಣೆ ಬಂದರೂ ಬೆಳೆದೀತೇ ತುಳಸಿ ಸಸಿ?

ಮತ್ತೆ, ಆಗಾಗ್ಯೆ ರೆಂಬೆ ಪಟಕ್ಕನೆ ಮುರಿದು ಮನೆಯ ಹಂಚಿಗೆ ಮಾರಕವಾಗುವುದು ನಿತ್ಯದ ಕತೆಯಾಗಿತ್ತು. ವರ್ಷಕ್ಕೊಂದು ನಲವತ್ತೈವತ್ತು ಹೆಂಚು ಈ ಮರಕ್ಕೇ ಆಹುತಿ.

ಮತ್ತೆ, ಆ ಮೇಸ್ತ್ರಿ ಹೇಳುತ್ತಾನಲ್ಲಾ: ‘ಈಗಿನ ಕಾಲದಲ್ಲಿ ಮರ ಅಂದರೆ ಬಂಗಾರ. ನಾಳೆ ಸ್ವಾಮೀ: ಇದು ಗೆದ್ದಲಿಗೇ ಆಯಿತು. ಕಟ್ಟಿಗೆಗೂ (ಸೌದೆ) ಆಗದು. ಮನೆಗೇ ಬೀಳದಿದ್ದರೆ ಸಾಕು. (ಅಪಶಕುನದ ಬಾಯಿಯೇ ಈ ನಾಯಮಾರ್ರವನದು!) ಈಗ ನೋಡಿ, ಮಂಗ-ಊರಿಂದ ಮರ ತರಿಸಿದ್ದೇನೆ. ಕ್ರಯ ಹೇಗೆ ಗೊತ್ತೇ? ನೀವು ಕನಸಿನಲ್ಲಿಯೂ ನೆನಸಲಿಕ್ಕಿಲ್ಲ. ಕೋಲಿಗೆ ಇಷ್ಟು; .. ...ಹಲಸಿಗೆ ಇಷ್ಟು .... .ಮಾವಿಗೆ ಅಷ್ಟು, ಬೋವಿಗೆ ಇಷ್ಟು; ಬೀಟಿಗಂತೂ ಭಯಂಕರ. ನೋಡಿ, ಒಂದು ಆಲೋಚನೆ ಮಾಡಿ.

ಹಣ ಯಾರಿಗೆ ಕಹಿಯಾಗುತ್ತದೆ? ಕಡಿಯೋಣವೇ ಎಂದು

ಲಕ್ಷ್ಮಮ್ಮನವರೊಡನೆ ಪ್ರಸ್ತಾಪಮಾಡಿದರು. "ಅಯ್ಯೋ ಛೇ, ಉಂಟಿ ಅಜ್ಜ ನಟ್ಟ ಮರವಲ್ಲವೇ" ಎಂದು ಮೊದಲು ಅಂದರೂ, ಕೊನೆ "ರೂಪಾಯಿ ನೋಡು. ಮರ ಎಂದರೆ ಚಿನ್ನ" ಎಂದಾಗ ಕಿವಿ ನೆಟ್ಟ ಯಿತು. "ಗೋಧಿ ಸರ ಒಂದು, ಒಂಕಿ ಬಳೆ ಒಂದು ಜೋಡು, ಬೇ ಎಂದು ಆಶೆಪಡುತ್ತಾ ಇದ್ದೇನಲ್ಲಾ. ಆ ಮರ ಇದ್ದು ಏನು ಸೌಭಾಗ್ಯ ತಿನ್ನಲಿಕ್ಕಿಲ್ಲ, ಉಣ್ಣಲಿಕ್ಕಿಲ್ಲ. ಅಂಗಳದ ತುಂಬಾ ಕಾಗೆ ಬಾವಲಿಗಳ ಹಿಕ ಬ್ರಾಹ್ಮಣರ ಮನೆಯೋ ಮಾದಿಗರ ಮನೆಯೋ ಎನ್ನುವ ಹಾಗೆ ಅಂಗಳ ತುಂಬಾ ಹಿಕ್ಕೆ, ತರಗೆಲೆ. ಹೆಂಚಿನ ಮಾಡವಂತೂ ಚಕಣಾ ಚೂರು. ಆದ ನೋಡಿ ನಾನು ಹೇಳಿದೆನಲ್ಲಾ ಒಂಕಿಬಳೆ, ಗೋಧಿಸರ, ಸುಬ್ಬಮ್ಮನ ತಂ ಮೊನ್ನೆ ಮಾಡಿಸಿದಾರೆ, ಅಂಥಾದ್ದೇ ... ..."

ಮರಕ್ಕೆ ಮರಣದಂಡನೆ ವಿಧಿಸಲ್ಪಟ್ಟಿತು. ಮೇಸ್ತ್ರಿಯ ಯಮದೂತ ಬಂದು ಸನ್ನದ್ಧರಾದರು. ಆದರೆ ಇದೆಲ್ಲಾ ವಿಚಾರದಲ್ಲಿ ಹುಡುಗ ಶ್ರೀ ವಾಸನ ಮಾತೇ ಯಾರೂ ಕೇಳಿರಲಿಲ್ಲ. ಈಗ ಆರಂಭವಾಯಿತು, ... ಅವನ ರಂಬಾ—ರೂಟಿ, ರಣರಂಪ; ರೋಷಾಕಾಂಡ. ಅತ್ತು ಕರೆ ಆರ್ಭಟಿಸಿದ, ಅಮ್ಮನ ಸೆರಗು ಜಗ್ಗಿದ, ಅಪ್ಪನೊಡನೆ ಸೆಣಸಿದ. ತಿನ್ನಲಿ ಉಣ್ಣಲಿಲ್ಲ. ಕೊನೆಗೆ ಸತ್ಯಾಗ್ರಹವೆಲ್ಲಾ ನಿಷ್ಫಲವಾದ ಮೇಲೆ ಪಿಕೆಟಿಂ ಹೂಡಿದ.

ಮೇಸ್ತ್ರಿಯ ದೂತರು ಎತ್ತಿದ ಕೊಡಲಿಗೆ ಅಡ್ಡವಾಗಿ, ಮರವನ್ನ ಹುಡುಗ ನಿಂತು ಆರ್ಭಟಿಸುತ್ತಿದ್ದ. ಕಣ್ಣಿಂದ ಗಂಗಾ—ಭಾಗೀರಥಿ. ಅಪ ಕರೆದರು: ಹುಡುಗ ಕದಲಲಿಲ್ಲ. ಸುಪಿಗೆರಾಯರು, ಈ ಚಂಡಿತನ ನೋ ತ್ತಿದ್ದವರು, ಧಡಾರನೆ ಎದ್ದು ಬದಿಯ ಹುಣಸೆ ಮರದಿಂದ ಒಂದು ರೆಂ ಕಿತ್ತು, ಸೊಪ್ಪನ್ನೆಲ್ಲಾ ಹರಿದು ಎಸೆದರು. ಈಚಿಗೆ ಬಂದು, ಹುಡು ಅಂಗಿ ಎತ್ತಿ, ನಾಲ್ಕು ರೊಂಯ್, ರೊಂಯ್ ಎಂದು ಬಾರಿಸಿದರು.

ಹುಡುಗ ಚೀತ್ಕರಿಸುತ್ತ, ನೋವು ತಾಳಲಾರದೆ ಓಡಿಹೋಯಿತ ಕೊಡಲಿಯೇಟು ಮರಕ್ಕೆ ಬೀಳಲಾರಂಭವಾಯಿತು.

ಹೊಡೆದೇನೋ ಆಯಿತು. ಮಕ್ಕಳಿಗೆ ಬುದ್ಧಿಗೆ ಹೊಡೆಯದೇ ಆ ತ್ತದೆಯೇ? ಆದರೆ ಒಬ್ಬನೇ ಒಬ್ಬ ಹುಡುಗನಿಗೆ ಹೊಡೆದರೆ ತಾಯಿ ತಂ

ಗಳಿಗೆ, ಹೊಟ್ಟೆಗೆ ಸುಣ್ಣ ನೀರು ಎರೆದ ಹಾಗಾಗುತ್ತದೆ. ಅಮ್ಮ ಸಮಾಧಾನ ಮಾಡಲೆಂದು ಹುಡುಗನ ಬೆನ್ನು ಹಿಡಿದಳು. ಮನೆಯ ಹಿಂದೆ ಕಲ್ಲಿನ ಮೇಲೆ ಕೂತು, ಹಲ್ಲು ಕಚ್ಚಿ, ಹುಬ್ಬುಗಂಟಿಕ್ಕಿದ್ದ. ಹೋಗಿ ಬಹಳ ಕೊಂಡಾಟ, ಮುದ್ದಾಟ ಮಾಡಿ, 'ಮಗೂ, ಸಿಟ್ಟುಮಾಡಬಾರದು. ಅಪ್ಪ ಹೊಡೆದದ್ದು ನಿನ್ನ ಬುದ್ಧಿಗೇ ಅಲ್ಲವೇ? ಹೀಗೆ ಛಲ ಹಿಡಿದರೆ ಹೇಗೆ? ಅಲ್ಲಾ, ಸ್ವಲ್ಪ ಆಲೋಚನೆ ಮಾಡಬೇಕು. ನೋಡು ಈ ಮರದಿಂದ ನಿಮಗೆ ಏನು ಕರ್ಮ ಸಿಗುತ್ತದೆ? ಹಣ್ಣಿಲ್ಲ, ಮಣ್ಣಿಲ್ಲ. ಈಗ ನೋಡು: ಈ ಮರ ಕಡಿದು ಹಲಗೆ ಮಾಡಿ, ರೀಪು ಮಾಡಿ ಮಾರಿದರೆ, ಹಣ ಸಿಗುತ್ತದೆ, ದುಡ್ಡು ಸಿಗುತ್ತದೆ. ನಿನಗೆ ಹೊಸ ಅಂಗೀ ..... .'

"ಊಂ" ಎಂದು ಬುಸುಗುಟ್ಟಿದ ಹುಡುಗ. "ಹಣ ಸಿಗುತ್ತದೆ. ಹಣದಿಂದ—ಕೇಳು, ಇಲ್ಲಿ--ಮುಖ ಈಚೆ ತಿರುಗಿಸು ... ...ನಾಳೆ ಬೇಳೆ ತಂದು, 'ಗಮ್ಮತು' ಹೋಳಿಗೆ ಮಾಡೋಣ, ಆಗದೇ?.... ..."

ಹುಡುಗ ಒಂದು ಕ್ಷಣ ಮುಖತಿರುವಿದ. ಮುಖದ ರೋಷದ ಮೋಡದ ಎಡೆಯಲ್ಲಿ ಒಂದು ಸಣ್ಣ ಆಶೆಯ ಮಿಂಚು ಹಾರಿತು. ಮರುಕ್ಷಣ ತನ್ನ ವ್ರತ ನೆನಪಾಗಿ "ಊಂ" ಎಂದು ಇನ್ನೊಮ್ಮೆ ಹೂಂಕರಿಸಿದ.

"ಒಳ್ಳೇ ಮುದ್ದು ಹುಡುಗನಲ್ಲವೇ ನೀನು. ಸುಮ್ಮನೆ ಅಳಬಾರದು. ಹಠಹಿಡಿಯಬಾರದು. ಈ ಹಳೇ ಮರ ಯಾವ ಮಣ್ಣಿಗೆ? ಹಣ ಸಿಕ್ಕಿದರೆ ಎಷ್ಟು ಖುಶಿ? ಅಂಗಿ, ಚಂಡು, ಪಾಯಸ, ಹೋಳಿಗೆ, ಹಾಲು, ತುಪ್ಪ, ಸೀರೆ, ಪುಗ್ಗಿ.... .."

ಹುಡುಗನಿಗೆ ಮಾಯ ಬಾಣ ನಾಟಿದಂತೆ ತೋರಲಿಲ್ಲ.

ಅಷ್ಟರಲ್ಲೇ ಅಪ್ಪನೂ "ಪಶ್ಚಾತ್ತಾಪದಿಂದ ದಗ್ಧ"ರಾಗಿ ಬಂದರು. ಹುಣಸೇ ಅಸ್ತ್ರವನ್ನು ವರ್ಜ್ಯಸಿದ್ದರು. 'ಛೇ! ಒಂದೇ ಮಗುವಿಗೆ ಹೊಡೆದೆ ನಲ್ಲಾ' ಎಂದು ಮನಸ್ಸು ಕಚ್ಚುತ್ತಿತ್ತು.

ಬಂದವರೇ ವೈದಡವುತ್ತಾ "ಶೀನಾ, ಸಿಟ್ಟುಮಾಡಬೇಡವೋ ಮಾಣಿ. ನಿನ್ನ ಬುದ್ಧಿ ಒಳ್ಳೇದಾಗಲಿ ಅಂತ ಅಲ್ಲವೇ ಹೊಡೆದದ್ದು? ಅಷ್ಟು ತಿಳಿಯ ಬಾರದೇ ಮಗು? ಈ ಹಾಳುಮರ ಕಡಿದರೆ ಸಿಗುತ್ತೆ ನೋಡು, ರೂಪಾಯಿ. ಝಣ ಝಣ ರೂಪಾಯಿ." ಹಾಗೇ ......ಏನೋ ಹೊಳೆದಂತಾಗಿ ಕಿಸೆಗೆ

ಕೈಹಾಕಿದರು. ಅಕಸ್ಮಾತ್, ಆಗಲೇ ಹೊರಗಿಂದ ಬಂದುದರಿಂದ, ಕಿಸೆಯಲ್ಲಿ ಎರಡು ರೂಪಾಯಿ ಇದ್ದುವು. ತೆಗೆದು: "ನೋಡೋ ಮಾಣಿ, ಝುಣ್‌ಝುಣ್ ಎಂದು ಹೇಗೆ ಕುಣಿಯುತ್ತಿವೆ? ಹೇಗೆ ಪಳಾಪಳಾ ಹೊಳೆಯುತ್ತಿವೆ? ಇದೋ ನಿನಗೆ. ಆಯಿತೇ?" ಎಂದು ಹೇಳಿ ಕೊಟ್ಟರು.

ಹುಡುಗನ ಕಣ್ಣು ಕೋರೈಸಿತು. ಒಮ್ಮೆ ಓರೆಗಣ್ಣಲ್ಲಿ, ಹೊಳೆಯುವ ರೂಪಾಯಿ ಕಡೆ ನೋಡಿದ. ತಂದೆಯು ಚಾಚಿದ ಕೈಯಲ್ಲಿ, ಆಮಂತ್ರಿಸುತ್ತಾ ವೈಯಾರದಲ್ಲಿ ರೂಪಾಯಿ ಕುಳಿತಿತ್ತು. ಬಿರಿದ ಕಣ್ಣುಗಳಿಂದ ಒಂದು ನಿಮಿಷ ನೋಡಿ, ಮೆಲ್ಲನೆ ತನ್ನ ಸಣ್ಣ ಕೈಗಳಿಂದ ತೆಗೆದ. ಎರಡೂ ಕೈಗಳಲ್ಲಿ ಬಿಗಿಯಾಗಿ ಹಿಡಿದುಕೊಂಡು, ಮನೆಯೊಳಗೆ ನುಸುಳಿದ. ಮುಖದಲ್ಲಿ ಹುಬ್ಬು ಗಂಟಿಕ್ಕಿದ ಕೋಪ ಮಾಯವಾಗಿತು. ರಜತ ಮಹಾತ್ಮೆ!

ಮಾರನೇ ದಿನ, ಅಮ್ಮನೂ ಮರೆಯದೆ, ಹೋಳಿಗೆಯನ್ನೂ ಮಾಡಿದರು. ಅದೇ ಅಜ್ಜ ನೆಟ್ಟ ಮರದ ಬೊಜ್ಜದ ಔತಣವಾಯಿತು. ದಕ್ಷಿಣೆಯೋ ಧಾರಾಳ—ಎರಡು ರೂಪಾಯಿ.

ಇದಾದ ಎರಡು ಮೂರು ತಿಂಗಳಲ್ಲೇ ಇನ್ನೊಂದು ಕತೆ ನಡೆಯಿತು. ಮನೆಯಲ್ಲಿ ಹಳೇ ಕಾಲದ ಊಳಿಗದವಳೊಬ್ಬಳಿದ್ದಳು—ಬಾಗಕ್ಕ. ಶೀನುವಿಗೆ ಮಾತ್ರವಲ್ಲ, ಸಂಪಿಗೆರಾಯರಿಗೂ ಅವಳೇ ಎಣ್ಣೆ ಹಚ್ಚಿ ಮೀಯಿಸಿದ ವೃದ್ಧೆ ಮಹಾರಾಯತಿ. ಸಂಪಿಗೆರಾಯರ ತಂದೆಗೆ ಮಿಾಶೆ ಹುಟ್ಟುವ ಮೊದಲೇ, ಮನೆಯಲ್ಲಿ ತೊತ್ತಾಗಿ ಸೇರಿದವಳು. ಇಂದಿಗೆ ಬೆನ್ನು ಬಾಗಿ ನೆಲ ಮುಟ್ಟುವವರೆಗೂ, ಕಣ್ಣು ಮಸಕಾಗಿರುವವರೆಗೂ, ತನ್ನ ಜೀವನವೆಂದು ಬೇರೊಂದಿಲ್ಲದೆ, ಇದೇ ಮನೆಯಲ್ಲಿ ದುಡಿದಿದ್ದಾಳೆ. ಸ್ವತಃ ಸಂಪಿಗೆರಾಯರಿಗೇ, ಅವರ ತಾಯಿಗೆ ದೊಡ್ಡ‡ ಸಂಕಟವಾದಾಗ ಮೊಲೆ ಕೊಟ್ಟವಳೂ ಇದೇ ಮುದುಕಿಯಂತೆ. ಶೀನುವಿಗೆ—ಎಲ್ಲಾ ಮಕ್ಕಳಿಗೆ ಸಹಜವಾದ,—ಮುದುಕಿಯ ಮೇಲೆ ವಿಶೇಷ ಪಕ್ಷಪಾತ ಇತ್ತು. ಬಚ್ಚಲ ಒಲೇ ಬುಡದಲ್ಲಿ ಬೆನ್ನು ಬಾಗಿಸಿ ಕುಕ್ಕರಿಸುವ ಮುದುಕಿಯ ಬಳಿಯಲ್ಲಿ ಹುಡುಗ ಕೂತು, ಪೀಡಿಸುವುದು, ಕತೆ ಕೇಳುವುದು ನಿತ್ಯದ ಕ್ರಮವಾಗಿತ್ತು.

‡ ಸಿಡುಬು ಮಹಾಮಾರಿ.

ಈ ಮುದುಕಿ ನೋಡಿ, ಪೂರಾ ಹಣ್ಣಾಗಿ, ಸುಕ್ಕುಗಟ್ಟಿ ಹೋಗಿದ್ದಳು. ಒಂದು ಕೊಡ ನೀರು ಎಳೆಯುವುದಕ್ಕೇ ಪ್ರಾಣಸಂಕಟವಾಗಿ ಹೋಗುತ್ತಿತ್ತು. ಕಸಗುಡಿಸುವುದಕ್ಕೂ ತೆವಳಿಕೊಂಡೇ ಹೋಗಬೇಕಿತ್ತು. ಮನೆಯ ನೆಂಟರನ್ನೆಲ್ಲಾ, ಬಂದು ವಿಚಾರಿಸುವುದಕ್ಕೂ, ಸಂಪಿಗೆರಾಯರ ತಂದೆಯ ಕಾಲದ ಸ್ತುತಿ, "ಆ ಕಾಲ ಹೋಯಿತು; ಏನು ಚಿನ್ನದಂಥಾ ಮನುಸಾ ..," ಹಾಡುವುದಕ್ಕೂ ಮಾತ್ರ ಈ ಜರ್ಜರ ಪ್ರಾಣಿ ಯೋಗ್ಯವಾಗಿತ್ತು. ಎಷ್ಟೊಂದು ದಿನ ಸಂಪಿಗೆರಾಯರು ಈ ಜೀವಚ್ಛವವನ್ನು ಇಟ್ಟುಕೊಳ್ಳಬೇಕು? ಒಂದು ದಿನ ಹೇಳಿಯೇ ಬಿಟ್ಟರು: "ಬಾಗೂ; ನಿನ್ನನ್ನು ಇಟ್ಟುಕೊಳ್ಳುವುದು ಯಾವ ಕರ್ಮಕ್ಕೆ? ನಿನ್ನ ಜೀವವೆ, ಎಳೆಯಲಾಗದವಳಿಗೆ, ನಮ್ಮ ಕೆಲಸ ಮಾಡು ಎಂದು ನಾವು ಹೇಳಬೇಕೇ? ಇಲ್ಲವೆ, ನಾವು ನಿನ್ನ ಸೇವೆ ಮಾಡುವುದೋ?"

ಮುದುಕಿ ಮಾತಾಡಲಿಲ್ಲ. ಏನು ಪ್ರಾರಬ್ಧ ಮಾತನಾಡುವುದು? ಅವಳಿಗೆ,—ಮಕ್ಕಳು, ಮನೆ, ಮಾರು, ಗಂಡ ಎಂದು ಏನೂ ದಿಕ್ಕು ಇರಲಿಲ್ಲ. ನೆಂಟರಿಲ್ಲ, ಇಷ್ಟರಿಲ್ಲ. ಆಪ್ತರಿಲ್ಲ, ಬಳಗವಿಲ್ಲ. ಎಲ್ಲವೂ, ಸರ್ವಸ್ವವೂ ಇದೇ ಮನೆತನ. ದೇವರು ತನ್ನನ್ನು ಇವರ ಸೇವೆಗಾಗಿಯೇ ಸೃಷ್ಟಿಸಿದ್ದೆಂದು ಅವಳಿಗೆ ಸಿದ್ಧಾಂತ. ಆದರೆ, ಈಗ ಅವರು ಹೇಳುತ್ತಿರುವುದು ನ್ಯಾಯವೇ ಸರಿ ಎಂದು ಅವಳೂ ಒಪ್ಪಿಕೊಂಡಳು. ತನ್ನಂಥ ಅರೆಜೀವದ ಮುದುಕಿಯನ್ನು ಯಾಕೆ ಮಣ್ಣಿಗೆ ಇವರು ಕಟ್ಟಿಕೊಳ್ಳಬೇಕು? ಸುಮ್ಮನೆ ಭಾರ. ಅನ್ನದಂಡ, ಭೂಮಿಗೆ ಭಾರ. ಯಾರದೂ ಏನೂ ಅವಳಿಗೆ ಅಪರಾಧ ಕಾಣಲಿಲ್ಲ.

ಆದರೆ ಮೂರ್ಖ ಹುಡುಗನಿಗೆ ಈ ವೃದ್ಧೆಯ ಅನುಭವ, ಜ್ಞಾನ ಎಲ್ಲಿಂದ ಬರಬೇಕು? ಪುನಃ ಶುರುಮಾಡಿದ ರೌದ್ರಾವತಾರಕ್ಕೆ. "ಬಾಗಜ್ಜಿ ಹೋಗಬಾರದೂ ಊ ಊ ... ..." ಎಂದು. ರಣರಂಪ, ಕ್ರಂದನ ರೋದನ, ಆರ್ಭಟ, ಚೀತ್ಕಾರ ಎಲ್ಲಾ ಆಯಿತು. ಅಮ್ಮ, ಅಪ್ಪ ಬೋಧಿಸಿದರು: "ಏ ಮೊದ್ದೇ! ಆ ಹಣ್ಣು ಮುದುಕಿಯನ್ನು ಇಟ್ಟುಕೊಂಡು ಏನು ಲಾಭವೋ? ನೀರು ತರಲಾಗುವುದಿಲ್ಲ. ಬಟ್ಟೆ ಒಗೆಯಲಿಕ್ಕೆ ಸೊಂಟದಲ್ಲಿ ಬಲವಿಲ್ಲ. ಕಸಾ ಗುಡಿಸೋದಕ್ಕೆ ತೋಳಲ್ಲಿ ಬಲವಿಲ್ಲ ... ...ಅನ್ನ ದಂಡ ಭೂಮಿ ಭಾರ. ಸುಮ್ಮನೆ ಅನ್ನ ಹಾಕಿ ಸಾಕಲು ಅನ್ನ ಛತ್ರವೇ? ಗಂಜಿ

ಮಠವೇ ?† ಆದರೆ ಹುಡುಗನಿಗೆ ನೀರು ಎರೆಯುವುದರಲ್ಲಿ ಕಸಾ ಗುಡಿಸುವುದರಲ್ಲಿ, ಬಟ್ಟೆ ಒಗೆಯುವುದರಲ್ಲಿ ಏನು ಅಭಿರುಚಿ? ನೀರು ಏಳೆಯದಿದ್ದರೆ ಹೋಗಲಿ, ಬಾಗಜ್ಜಿ ಕತೆ ಹೇಳುವುದಿಲ್ಲವೆ? ಬೆಳಗ್ಗೆ ಇನ್ನು ಯಾರೊಟ್ಟಿಗೆ ಚಳಿಕಾಯಿಸುವುದು? ಆಕ್ರೋಶ ನಿಲ್ಲಲಿಲ್ಲ.

ಥಕ್ಕನೆ ತಂದೆಗೆ ಕಳೆದ ಬಾರಿಯ ಯಕ್ಷಿಣಿ ಮಂತ್ರ ನೆನಪಾಯಿತು. ಒಳಗಿಂದ ಒಂದು ಬೆಳ್ಳಿಯ ರೂಪಾಯಿ ತಂದು, ಹುಡುಗನ ಕಣ್ಣ ಎದುರು ಕುಣಿಸಿದರು. ರಣ್ ಎಂದು ಬಾರಿಸಿದರು. "ನೋಡು! ಒಳ್ಳೇ ಮುದ್ದು ಹುಡುಗನ ಹಾಗೆ, ಕಣ್ಣು ಒರಸಿ, ಅಳುವುದು ನಿಲ್ಲಿಸಿ, ದೇವರಿಗೆ ನಮಸ್ಕಾರ ಮಾಡಿದರೆ, ಈ ರೂಪಾಯಿ'' ಎಂದು ಪ್ರಲೋಭನೆ ತೋರಿದರು. ಹುಡುಗನ ಕಣ್ಣು ಅರಳಿತು. ಒಮ್ಮೆ ಆಚೆ ಈಚೆ ನೋಡಿದ. ಆ ಸಣ್ಣ ಹೃದಯದಲ್ಲಿ ಏನೋ ಸಣ್ಣ ಹೊಯ್ದಾಟ, ಘರ್ಷಣೆ ಆಗಿರಬೇಕೆಂದು ತೋರುತ್ತದೆ. ಮನಸ್ಸು ಹಾಗೋ ಹೇಗೋ ಎಳೆಯುತ್ತಿತ್ತು. ಕೊನೆಗೆ, ಆ ಹೊಳೆಯುವ, ಝಣಝಣಿಸುವ ರೂಪಾಯಿಯ ಮೋಹ, ಇಂದ್ರಜಾಲ ಕರೆಯಿತು. ಅಂಗಿಯಿಂದ ಕಣ್ಣೊರಸಿಕೊಂಡು, ಅಳು ನುಂಗಿ, ದೇವರ ಮನೆಗೆ ಓಡಿ ಹೋಗಿ, ತೂಕಡಿಸುತ್ತಿದ್ದ ದೇವರಿಗೆ ಅಡ್ಡ ಬಿದ್ದು ಓಡಿಬಂದು ಅಪ್ಪನಿಂದ ರೂಪಾಯಿ ಕಿತ್ತುಕೊಂಡ.

\+ \+ \+ \+ \+ \+

ಸಂಪಿಗೆರಾಯರು ಒಳ್ಳೇ ಪುಣ್ಯಾತ್ಮರೆಂದು ಎಲ್ಲರೂ ಹೇಳುತ್ತಿದ್ದರು. ದೇವರು ಸಂತಾನವನ್ನೇನೋ ಕೊಡಲು ಕೈಗಿಡ್ಡ ಮಾಡಿದ. ಒಂದೇ ಸಂತಾನ. ಆದರೆ, ಇದ್ದರೆ ನೋಡಿ ಮಕ್ಕಳು ಇರಬೇಕು ಶೀನುವಿನಂತವರು. ಏನು ಚಾಲಾಕು ಹುಡುಗ! ಪೂರ್ವಾಪರ ಎಲ್ಲಾ ನೋಡಿಯೇ, ಮೈಯೆಲ್ಲಾ ಕಣ್ಣಾಗಿ ನಡೆಯುತ್ತಾನೆ. ಶಾಲೆಯಲ್ಲಿ ಇರುವಾಗಲೇ, ಕಡ್ಡಿ, ಪೆನ್ಸಿಲು, ಕಾಗದಗಳ ವ್ಯಾಪಾರ ಮಾಡಲಿಕ್ಕೆ ಹಚ್ಚಿದ್ದ. ಕಡ್ಡಿ, ಪೆನ್ಸಿಲು, ಪುಸ್ತಕಗಳನ್ನು ಅಡವಾಗಿ ಇಟ್ಟುಕೊಂಡು, ಪೈ—ಪಾವಾಣೆ ಸಾಲ, ಬಡ್ಡಿಗೆ ಕೊಡುತ್ತಿದ್ದ. ದೊಡ್ಡ ಧನಕೋಟಿ ಸೆಟ್ಟಿ ಆಗುತ್ತಾನೆಂದು ನೋಡಿದವರೆಲ್ಲಾ ಹೇಳುತ್ತಿದ್ದುದು ಸತ್ಯವೇ ಆಯಿತು. ಈಗ ನೋಡಿ ಭಂಡಸಾಲೆ

† ನಮ್ಮೂರಲ್ಲೊಂದು ಮಠ. ಒಂದಕ್ಕೆ ದಿನಾ ಗಂಜಿ—ದಾನವಿತ್ತು. ಈಗ ಕಲಿಯುಗ ಅನ್ನಿ.

ತೆರೆದಿದ್ದಾನೆ. ಅವನ ಅದೃಷ್ಟವೂ ತೆರೆದೇ ಇದೆ. ಇವನ ಹಣ ಇಡಲು ಮಂಗಳೂರಿನ ಬ್ಯಾಂಕುಗಳಲ್ಲೆಲ್ಲಾ ಸ್ಥಳವಿಲ್ಲವೆಂದು ಊರಲ್ಲೆಲ್ಲಾ ಮಾತು. ಇಂಥಾ ಮಕ್ಕಳು ಹುಟ್ಟುವುದು ಅಂದರೆ. ತಂದೆತಾಯಿಗಳ ಸುಕೃತ ಅನ್ನ ಬೇಕು. ಇನ್ನು ಅನ್ನ-ಧ್ವಂಸಕರೋ, ಒಂದು ನಾಲ್ಕಕ್ಷರ ಕಲಿತು ಸಿಗರೇಟು ವಿದ್ಯಾಪಾರಂಗತರಾದ ಹಾರೆ-ಗುದ್ದಲಿ-ದ್ವೇಷಿಗಳೋ! ಥೂ!

ಶ್ರೀನಿವಾಸ ಮಾಡದ ವ್ಯಾಪಾರವಿಲ್ಲ. ಮುಖ್ಯವಾಗಿ ಹಣದ ವ್ಯಾಪಾರ, ದಳ್ಳಾಳಿತನ: ಆಸ್ತಿ ಕೈಯಿಂದ ಕೈಗೆ ದಾಟಿಸುವುದು, ಬಡ್ಡಿಗೆ ಸಾಲಕೊಡುವುದು, ಅಕ್ಕಿಯನ್ನು ದೀವಿ*ಗೆ, ಪೋಲೀಸರಿಗೆ ಪೂಜೆ ಪುನಸ್ಕಾರ ಮಾಡಿ, ಒಲಿಸಿ, ವರಪಡೆದು, ಅವರ ಕಣ್ಣು ತಪ್ಪಿಸಿದಂತೆ ನಟಿಸಿ, ಸಾಗಿಸುವುದು, ಮನೆಕಟ್ಟಿಸುವುದು, ಸೌದೆ- ಹಂಚು, ಬೈಹುಲ್ಲು ವ್ಯಾಪಾರ ಎಲ್ಲದರಲ್ಲೂ ಸಿದ್ಧ ಹಸ್ತ. ಮುಟ್ಟಿದ್ದೆಲ್ಲಾ ಚಿನ್ನ ಅನ್ನುತ್ತಾರಲ್ಲಾ ಹಾಗೆ ಕೆಲವರ ಅದೃಷ್ಟ ನೋಡಿ. ಕೇಳಿಕೊಂಡು ಬಂದದ್ದು.

ಬುದ್ಧಿವಂತರ ಸಂಸಾರದಿಂದಲೇ, ಒಳ್ಳೇ ಜಾಗ್ರತೆಯ ಹುಡುಗಿಯೇ ಇವನ ಮನೆ ಹೊಕ್ಕಳು. ಮತ್ತೆ ಸೌಭಾಗ್ಯಕ್ಕೆ ಅಂತ್ಯವೇ ಉಳಿಯಲಿಲ್ಲ. ಆದರೆ ಅತ್ತೆ-ಮಾವಂದಿರಿಗೆ, ಅಂದರೆ ಸಂಪಿಗಿರಾಯರಿಗೆ ಮತ್ತು ಅಮ್ಮನವರಿಗೆ, ಸ್ವಲ್ಪ ಕಿರುಕುಳ. ಅಂದರೆ ನೋಡಿ: ಈ ಮುದಿಯರು ಇದ್ದರೆ ಯಾವಾಗಲೂ ಅನಾನುಕೂಲ. ಅವರಿಗೆ ಯಾವಾಗಲೂ ಉಪಚಾರವಾಗ ಬೇಕು. ಇಲ್ಲದ ಸಲ್ಲದ ಪೂಜೆ ಪುನಸ್ಕಾರ, ಸಂಪ್ರದಾಯ ಬೇರೆ. ಅಲ್ಲಾಂದರೆ—ಈ ಹಣ್ಣೆಲೆಗಳೆಲ್ಲಾ ಇದ್ದು ಲೋಕಕ್ಕೆ ಏನು ಪ್ರಯೋಜನಾ ಎಂದು?

ಅಪ್ಪನಿಗೆ ವಾನಪ್ರಸ್ಥವನ್ನು ಸರಿಯಾಗಿ ಬೋಧಿಸಿ, ಆಸ್ತಿ, ಮನೆಯನ್ನೆಲ್ಲಾ ತನ್ನ ಹೆಸರಲ್ಲೇ ಬರೆಸುವಂತೆ ಮಾಡಿದ. ಸಂಪಿಗೆರಾಯರಿಗೂ ಕಂಡಿತು: "ನನಗೇಕೆ ಮುದಿ ಧೃತರಾಷ್ಟ್ರನಿಗೆ, ಕಪೋತಿಗೆ, ಅರುವತ್ತರ ಅರಮರುಳು ಹಿಡಿದ ಪ್ರಾಣಿಗೆ, ಈ ಗೊಂದಲ? ಏನೋ, ಶೀನು, ದೇವರ ದಯದಿಂದ ಭಾಗ್ಯವಂತನಾಗಿದ್ದಾನೆ. ಅವನಿಗೆ ಲಕ್ಷ್ಮಿ ಒಲಿದಿದ್ದಾಳೆ. ಅವನ ಸುಖದಲ್ಲೇ ನಾವೂ ನಮ್ಮ ಮುಸ್ಸಂಜೆಯನ್ನು ಕಳೆಯುವುದು." ಅಮ್ಮನಿಗೇನೋ ಮನಸ್ಸಿಗೆ ಒಗ್ಗಲಿಲ್ಲ. ಈಗ ತಾನು ಯಾರು? ಮನೆಯ ಬೇಗದ

* ದೀವಿ = ಲಕ್ಷದೀಪ. Laccadives. ಇಲ್ಲಿ ಅಕ್ಕಿಗೆ ಬರ.

ಕೈ ಸೊಸೆಯ ಕೈಯಲ್ಲಾಯಿತು. ತಾನು ಮುದಿಗೂಬೆಯಾದೆ. ಅವಳದೇ ರಾಜ್ಯವಾಯಿತು

ಸೊಸೆಗೆ, ಅತ್ತೆನಮ್ಮನವರು. ಮಾವಂದಿರಂತೆಯೇ ವಾನಪ್ರಸ್ಥ ಧರ್ಮ ವನ್ನು ಸ್ವೀಕರಿಸದೇ ಇದ್ದುದು ಸರಿಬೀಳಲಿಲ್ಲ. ಸ್ತ್ರೀ—ಅಂದರೆ ಬೇರೆ ಹೆಂಗಸು—ಪತಿಯನುಸಾರಣಿಯಾಗಬೇಕೆಂಬುದು ಅವಳ ಧರ್ಮ. ಹಾಗಾಗಿ ಬೇರೇ ಮನೆ ಮಾಡಿದರು, ಮಗ, ಸೊಸೆ. ಆದರೂ ಮನೆಯ ಆಡಳಿತ ಶೀನುವೇ ನೋಡಿಕೊಳ್ಳುತ್ತಿದ್ದ. ಮತ್ತೆ ಯಾರು ನೋಡಿಕೊಳ್ಳ ಬೇಕು ?

ಆಗ ತಾನೆ, ಅಕ್ಕಿಯ ವ್ಯಾಪಾರದಲ್ಲಿ ಕೈಹಾಕಿದ್ದ. ಹಣ ಹಾಕಿದಷ್ಟೂ ಲಾಭ. ಎರೆಹುಳು ಗಾಳಕ್ಕೆ ತಾಕಿಸಿ ಮೀನು ಎಳೆದಂತೆ. ಮೀನಲ್ಲ— ತಿಮಿಂಗಲದಂತ ಲಾಭ ಬರುತ್ತಿತ್ತು, ಹಾಕಿದ ಕಾಸಿನ ಮೇಲೆ. ದೀವಿಗೆ ಕದ್ದು ಮುಚ್ಚಿ ಅಕ್ಕಿ ಕಳಿಸುವ ಕಳ್ಳಸಂತೆ ವ್ಯಾಪಾರದಲ್ಲಿ ಎಲ್ಲಾ ಹಣ ಹಾಕಿದ. ಆದರೂ ಸಾಕಾಗಲಿಲ್ಲ. ಮನೆಯಲ್ಲಿ ಸಾಧ್ವೀಮಣಿ ಕರುಣೆಯಿಂದ ಕೊಟ್ಟ ಚಿನ್ನವನ್ನೆಲ್ಲಾ ಹಾಕಿಯೂ ಆಯಿತು. ಆದರೂ ಇನ್ನೂ ಬೇಕಾ ಗಿತ್ತು. ಅಂದರೆ ಹೇಳಿದೆನಲ್ಲಾ: ಬೆಳ್ಳಿಯ ಬೀಜ ಹಾಕಿದರೆ, ಭಂಗಾರ ಉದ್ಭವಿಸುವ, ಕರಿಸಂತೆಯ, ಯುದ್ಧದ ಕಾಲ. ಕಡೆಗೆ ಮನೆಗೆ ಹೋಗಿ, ಅಪ್ಪನೊಡನೆ, ಒಳಗಿನ ದೇವರ ಚಿನ್ನದ ಪೀಠ ಒಮ್ಮೆಗೆ ಕೊಡಬೇಕೆಂದು ಕೇಳಿದ. "ಇದೊಂದು ಗರ್ಜು ದಾಟಲಿ; ಈ ಪೀಠದ ಅಪ್ಪನಂತದ್ದು ನಾನು ಮಾಡಿಸಿಕೊಡುತ್ತೇನೆ. ದೇವರಿಗೇನು, ನೆಲದಲ್ಲಿ ಕೂತರೆ, ಮುಂಡಿ ನೋಯಲಿಕ್ಕಿಲ್ಲ" ಎಂದ. ಮುದಿ ಅಪ್ಪ: "ಅಯ್ಯೋ! ಉಂಟೇ? ಶಾಂತಂ! ಪಾಪಂ!" ಅಂದರೆ "ಹೇಳಲಿಲ್ಲವೇ ? ಇದರ ಹತ್ತು ಪಾಲಿನಷ್ಟರದು ಕೊಡು ತ್ತೇನೆ ದೇವರಿಗೆ ಎಂದು? ಸುಮ್ಮನೆ, ದೇವರು ಪೀಠದ ಮೇಲೆ ಕೂತೂ ಕೂತೂ, ಏನು ಸಾರ್ಥಕ? ಸ್ವಲ್ಪ ಕಾಸು ಗಳಿಸಲಿ, ದೇವರು" ಎಂದ. ಅಪ್ಪ ಒಪ್ಪುವುದನ್ನೇನೋ ಒಪ್ಪಲಿಲ್ಲ. ಆದರೆ ಮನೆ ಯಾರದು? ಮಗನ ದಷ್ಟೆ? ಸೀದಾ ತೆಗೆದುಕೊಂಡು ಹೋದ.

ಸಂಪಿಗೆರಾಯರಲ್ಲಿ ವರ್ಷಕ್ಕೊಮ್ಮೆ ಮಾನವಮಿ ಬಹಳ ಸಂಭ್ರಮ ದಿಂದ ಮಾಡುವುದು ಅನಾದಿಕಾಲದ ಪದ್ಧತಿ. ಊರಿಗೆ ಊರೇ ಬಂದು

ಸೇರುತ್ತಿತ್ತು. ಬ್ರಾಹ್ಮಣರು ಅಂತಃಶಾಲೆಯಲ್ಲಾದರೆ, ಮಾದಿಗರು ಹಿಂದಿನ ಅಂಗಳದಲ್ಲಿ. ಶೂದ್ರರು ಎದುರು ಅಂಗಳದಲ್ಲಿ. ಊರಿಗೇ ಔತಣ. ದೇವಿಗೆ ಬೆಡಗಿನ ಅಲಂಕಾರ, ಪೂಜೆ, ವಾದ್ಯ—ಘೋಷ. ವರುಷಕ್ಕೊಂದು ಸತ್ಯ ನಾರಾಯಣ ಪೂಜೆ (ಕತೆ) ಮತ್ತೆ ಮೂರು ನಾಲ್ಕು ಪೂರ್ವಜರ ತಿಥಿಗಳು, ಇವೆಲ್ಲಾ ಸಂಪ್ರದಾಯದಂತೆ, ಭೂರಿ-ಭೋಜನ, ಬ್ರಾಹ್ಮಣ-ಸಂತರ್ಪಣೆ, ದಾನ-ದಕ್ಷಿಣೆಗಳೊಡನೆ ನಡೆದುಹೋಗುತ್ತಿದ್ದುವು.

ಏನೋ ಹಳಬರ ಭ್ರಮೆ. ಇಲ್ಲವಾದರೆ ಯಾಕೆ ಈಗಿನ ಕಾಲದಲ್ಲಿ ಈ ದುಂದು ಅಂತ? ಇದರಿಂದ ಏನು ಪುರುಷಾರ್ಥ? ಇದೇ ಹಣವನ್ನು ಚಿಮಿಣಿ ಎಣ್ಣೆಯ ಕರಿಸಂತೆಯ ವ್ಯಾಪಾರದಲ್ಲೋ, ಎಮ್ಮೆಗಳ ಅಥವಾ ಸೌದೆಯ ವ್ಯಾಪಾರದಲ್ಲೋ ಹಾಕಿದರೆ, ಚಿನ್ನದ ಕಿರೀಟ ಇಟ್ಟು ತಿರುಗ ಬಹುದು. ಶೀನು, ಅಪ್ಪನಿಗೆ ಮನಸ್ಸು ಬಿಚ್ಚಿ ಹೇಳಿಯೇ ಬಿಟ್ಟ.

ಸಂಪಿಗೆರಾಯರಿಗೆ ಬಹಳ ಸಿಟ್ಟು ಬಂತು. "ಏನು? ದೇವರು—ಧರ್ಮ, ಅಜ್ಜ-ಮುತ್ತಂದಿರ ನೇಮ ನಿಯಮಕ್ಕಿಂತ ಈ ಹಾಳು ಕಾಸು ಹೆಚ್ಚಾ ಯಿತೇ?" ಎಂದು ಘುಡುಘುಡಿಸಿದರು. ಅಮ್ಮ: "ಈಗಿನ ಕಾಲದ ಹೆಣ್ಣುಗಳ ಇಂದ್ರಜಾಲ ಅಂದರೇ ಹೀಗೇ. ದೇವರು-ಧರ್ಮ ಅಂದರೆ ಹೆದರುವ, ಆಚಾರವಂತರ ಹೊಟ್ಟೇಲಿ ಹುಟ್ಟಿದ ಮಗನ ಮೇಲೆ ಏನು ಮಂತ್ರವಾದ ಮಾಡಿದಳೋ ಭಗವಂತಾ!" ಎಂದು ರಾಗವೆಳೆದರು. ಶ್ರೀನಿವಾಸ: "ಏನೇ ಹರಟೆಕೊಳ್ಳಿ, ಅಮ್ಮಾ, ಎಷ್ಟೇ ಗುಡುಗಿರಿ ಅಪ್ಪಾ, ಈ ಮನೆಯ ಯಜ ಮಾನ ನಾನೆಂದು ಸ್ವಲ್ಪ ಯೋಚಿಸಬಾರದೇ? ಸುಮ್ಮನೇ ಈ ಬ್ರಾಹ್ಮಣ ರಿಗೆ, ಬಕಮಾರಿಗಳಿಗೆ, ದೇವರಿಗೆ ದಿಂಡರಿಗೆ ಎಂದು ಏಕೆ ತಿನ್ನಿಸಿ ಹಣ ಹೋಮ ಮಾಡುವುದು? .....ಆಸ್ತಿಯೋ ಇನ್ನೊಂದೋ ಕಟ್ಟಬಾರದೇ?"

ಶ್ರೀನಿವಾಸನ ಯಜಮಾನಿಕೆಯ ಪರೀಕ್ಷೆಯ ದಿನವೂ ಬಂತು. ಸಂಪಿಗೆರಾಯರ ಮಾಳಿಗೆ-ಮನೆ ಹಿತ್ತಿಲಿಗೆ ಮಂಗಳೂರಿಂದ ಯಾರೋ ದೊಡ್ಡ ಗಿರಾಕಿಗಳು —ಬೊಂಬಾಯಿ ಕಡೆಯಿಂದ ಬಂದವರು—ಬಂದರು. ತಲೆ ತಿರುಗಿಸುವಂಥಾ ಬೆಲೆ ಕೊಡಲು ಸಿದ್ಧರಾಗಿ, ಚೆಕ್ ಪುಸ್ತಕವನ್ನು ಗರ್ರನೆ ಕಣ್ಣೆದುರಿಗೆ ತಿರುಗಿಸಿದರು. ಅವರಿಗೆ ಪ್ರಶಾಂತವಾದ ಹಳ್ಳಿಯಲ್ಲಿ "ನೇಚರ್ ಮಡ್ಡಮ್ಮ"ನ ಸುಖಸಾನ್ನಿಧ್ಯದಲ್ಲಿ ಒಳ್ಳೇ ಬಂಗಲೇ ಬೇಕಿತ್ತಂತೆ.

ಮನೆಯೇನೋ ಹಳೆಯಮಟ್ಟಿನದು. ಆದರೆ ಮುಂದೆ "ತಾಜಾ" ತಾಜ-ಮಹಲ್ ಆಗಿ ಮಾಡೋಣವಂತೆ ಎಂದು ಯೋಚನೆ. ರಿಜಿಸ್ಟ್ರಿ ಆಫೀಸಿಗೆ ಎಂದು ಬರುವಿರಿ? ಮುಂಗಡ ಹಣ ಈಗಲೇ—ಇದೋ—ಕೊಳ್ಳಿ. ಎಂದು ಆಮಂತ್ರಣ ಬೇರೆ.

ಅಲ್ಲಾ. ಈ ಹಳೆ ಮನೆ ಯಾವ ಪುರುಷಾರ್ಥಕ್ಕೆ? ಆ ಮುದುಕ ಮುದುಕಿ ಭೂತಗಳ ಹಾಗೆ ಆ ದೊಡ್ಡ ಕೋಟೆಯಲ್ಲಿ ಯಾಕೆ ವಾಸಿಸ ಬೇಕು? ನಮ್ಮ ಸಂಸಾರಕ್ಕೇ ದೊಡ್ಡದಾಯಿತು. ಅಪ್ಪನಿಗೆ ಏನು ಭ್ರಾಂತಿ? ಪೂರ್ವಜರ ಮನೆಯಂತೆ. ಅಜ್ಜ ಮುತ್ತಜ್ಜಂದಿರದಂತೆ. ಅಜ್ಜ ನಟ್ಟ ಆಲದ ಮರಕ್ಕೇ ನೇಣುಹಾಕಿಕೊಂಡು ಸಾಯಬೇಕೆಂದೇ ಮುದುಕರ ತರ್ಕ. ಹಣವೇನು ಕಹಿಯಾಗುತ್ತದೆಯೇ? ಅದೂ ಕಣ್ಣು ಕತ್ತಲು ಬರಿಸುವಷ್ಟು ಕೊಡುತ್ತಾರೆ. ವಿದ್ಯಾರಣ್ಯರ ಸುವರ್ಣವೃಷ್ಟಿಯ ಹಾಗೆ ರೂಪಾಯಿ ಮಳ ಗೆರೆಯಲು, ಈ ಊರಿನ ಧಾರಣೆ ಗೊತ್ತಿಲ್ಲದ ಪರ ಊರವರು ತುದಿಗಾಲ ಮೇಲೆ ನಿಂತಿದ್ದಾರೆ.

ತಂದೆಗೆ ಸ್ಪಷ್ಟವಾಗಿ ಹೇಳಿದ: "ನೋಡಿ, ಈ ಪ್ರಚಂಡ ದುರ್ಗ ನಿಮಗೆ ಇಬ್ಬರಿಗೆ ಯಾವ ಕರ್ಮಕ್ಕೆ? ಅಜ್ಜಂದಿರು ಕಟ್ಟಿದ್ದು ಎಂದು ಅರ್ಥ ಇಲ್ಲದ ಅಭಿಮಾನ. ಗೆದ್ದಲು ತಿನ್ನಲಿಕ್ಕಿಲ್ಲವೇ? ಇದನ್ನು ಮಾರಿ, ಇದರ ಹಣದಿಂದ ಮಂಗಳೂರಲ್ಲಿ ಒಂದು ಹತ್ತು ಮನೆ ಕಟ್ಟಿಸಿ ಹಾಕಬಹುದು. ಈಗಿನ ಕಾಲದಲ್ಲಿ ಮನೆ ಎಂದರೆ ಸರಿ; ಮಾಡು ಒಂದು ಇದ್ದರೆ ಆಯಿತು; ಕೋಳೀ ಗೂಡಿಗೂ ಹೇಳಿದ ಬಾಡಿಗೆ ತೆತ್ತು, ಜನ ನುಗ್ಗುತ್ತಾರೆ. ಸಂಕಪ್ಪ ಮೂಲ್ಯನ ಆಸ್ತಿಯೂ ಮಾರಾಟಕ್ಕಿದೆಯೆಂದು ಯಾರೋ ಹೇಳಿದರು........ ಸುಮ್ಮನೆ ಛಲಮಾಡಿ ಪ್ರಯೋಜನ ಇಲ್ಲ. ಈ ಹಳೇ ಬತ್ತೇರಿಯನ್ನಿಟ್ಟು ಕೊಂಡು ಏನು ಪುರುಷಾರ್ಥ? ಏನು ಲಾಭ? ... ...ನೀವೂ, ಅಮ್ಮನೂ ನಮ್ಮಲ್ಲಿಯೇ ಬಂದು ಇರಿ. ನಾವೇನು ಬೇರೆಯವರೆ? ನಿಮ್ಮ ಸೇವೆ ನಾವೇ ಮಾಡಬೇಕಷ್ಟೆ? ... ..."

ಮುದುಕರಿಬ್ಬರಿಗೂ ಜೀವ ಜೀವವೇ ಕೊಂದಂತೆ ಆಯಿತು. ತಂದೆ ಸಂಪಿಗೆರಾಯರಿಗೆ ಪೂರ್ವಜರ ಮನೆಯನ್ನು ಬಿಡುವುದು ಪಿತೃಹತ್ಯೆಯಂತೆ ಆಗಿತ್ತು. ಅಂಗಲಾಚಿ ಬೇಡಿದರು: "ನನಗಿನ್ನು ನಾಲ್ಕು ದಿನದ ಆಯುಷ್ಯ

ಮಗು; ಹಿರಿಯರ ಮನೆ ಬಿಟ್ಟರೆ, ಅದೂ ಎರಡೇ ದಿನ ಆಗುತ್ತದೆ."
"ಎಲ್ಲಿಯ ಕತೆ? ಉಂಟೇ? ಮನೇ ಬಿಟ್ಟರೆ ಆಯುಸ್ಸು ಕಡಿಮೆಯಾಗತ್ತ ದೆಂದು ಯಾವ ಡಾಕ್ಟರು, ಪಂಡಿತ, ಹಕೀಮು ಹೇಳಿದ್ದಾನೆ? ಈಗಿನ ಕಾಲದಲ್ಲಿ ಡಾಕ್ಟರರ ವಿಲಾಯತಿ ನೀರು ಬಾಯಿಗೆ ಬೀಳದೆ, ಯಾರೂ ಸಾಯುವುದಿಲ್ಲ" ಎಂದು ಭರವಸೆ ಕೊಟ್ಟ ಪುತ್ರ ರತ್ನ.

ತಾಯಿಗೆ ಸೊಸೆಯ ರಾಜ್ಯದಲ್ಲಿ ಇನ್ನು ಪ್ರಜೆಯಾಗಬೇಕೇ ಎಂಬ ಭಯ ಬಾಧಿಸುತ್ತಿತ್ತು. ಇಬ್ಬರೂ 'ನನ್ನಾಣೆ, ನನ್ನಾಣೆ' ಎಂದು ಹೇಳಿ ಕೊಂಡರು. ಜೀವ ಹೋದರೂ ಹಿರಿಯರ ಮನೆಯಿಂದ ಕದಲುವುದಿಲ್ಲ. ನೀನು ಗಂಡಸಾದರೆ, ನಮ್ಮನ್ನು ಕತ್ತಿಗೆ ಕೈಹಾಕಿ ದಬ್ಬುವುದನ್ನು ನೋಡು ತ್ತೇನೆ" ಎಂದರು ತಂದೆ ಮುದಿ ಹಠದಿಂದ.

ಆದರೆ ಶೀನುವಿಗೆ ಅಷ್ಟು ವಿವೇಕವಿಲ್ಲವೇ? ಪೂರ್ವಾಪರ ಜ್ಞಾನ ಇಲ್ಲವೇ? ಮುದಿಯರ ಸಿಡುಕಿಗೆ ಹೆದರಿ, ಅಮ್ಮನ ಕಣ್ಣೀರಿಗೆ ಅಂಜಿ, ಹತ್ತು-ಇಪ್ಪತ್ತು ಸಾವಿರದ ಲಾಭವನ್ನು ಬಿಡುವುದುಂಟೇ? ಧೃತರಾಷ್ಟ್ರ-ಗಾಂಧಾರಿ ಯರ ಸತ್ಯಾಗ್ರಹಕ್ಕೆ ಸೊಪ್ಪು ಹಾಕಲಿಲ್ಲ. ಸಾಮಾನು ಎಲ್ಲಾ ಸಾಗಿಸಿಯೇ ಬಿಟ್ಟ. ಮಾರಾಟವೂ ಮಾಡಿ ಬಿಟ್ಟ. ಒಳ್ಳೇ ಮಾತಿನಲ್ಲಿ ಹೊರಟು, ಬಂದು ಬಿಡಿ, ಎಂದು ಸತ್ಯಾಗ್ರಹಿಗಳಿಗಿಬ್ಬರಿಗೂ ಜಾಗ್ರತೆ ಕೊಟ್ಟು ಹೋದ.

ಎರಡು ದಿನಗಳಲ್ಲಿ ಹೊಸ ಯಜಮಾನರು, ಮಕ್ಕಳು-ಮರಿ, ಆಳು-ಹೋಳು, ಸಾಮಾನು-ಸರಂಜಾಮು, ಟಾಮಿ-ಟೈಗರ್, ದನ-ಕರು, ತೊಟ್ಟಿಲು-ಕಪಾಟು, ಕುಪ್ಪಿ-ಭರಣಿ, ಮೇಜು-ಖುರ್ಚಿ, ಮೋಟಾರ್ ಸೈಕಲ್ ಏವಂ ಬೇಬಿ-ನರಸಮ್ಮ ಇತ್ಯಾದಿಗಳ 'ಗಡಣದಿಂದೊಡಗೂಡಿ' ಗೃಹಪ್ರವೇಶ ಮಾಡಿದಾಗ, ಮುದಿಯರಿಬ್ಬರೂ ವಿಷದ ಗುಟುಕು ನುಂಗಿ ದಂತೆ ಸಂಕಟಪಟ್ಟುಕೊಂಡು ಹೊರಹೊರಡಬೇಕಾಯಿತು. ಮುದಿಯ ಸಂಪಿಗೆರಾಯರು ಕೋಲು ಊರುತ್ತಾ, "ಅವನ ಇಷ್ಟ ಇದ್ದಂತೆ ಆಗಲಿ" ಎಂದುಕೊಂಡು, ಬಾಗಿಲಿಂದ ಹೊರಹೊರಟರು. ಹೊರಟವರೇ ಧಡಾರನೇ ಬಿದ್ದುಬಿಟ್ಟರು .......ಆ ಸತ್ತ ಹಾಳು ಅಜ್ಜ ನಟ್ಟ ಮಾವಿನಮರದ ಹಳೇ ಬೇರೊಂದು ಕಾಲಿಗೆ ಸಿಕ್ಕು, ಎಡವಿದ್ದರು.

---

# ಶುದ್ಧ ಫಟಿಂಗ

ಯಾವ ಯುಗದ ಮಾತೋ ಏನೋ. ಈಗ ಅಕಸ್ಮಾತ್ತಾಗಿ ಕಣ್ಣಿಗೆ ಕಟ್ಟುತ್ತದೆ: ಹತ್ತು ಹನ್ನೆರಡು ವರುಷಗಳ ಹಿಂದಿನದು ನೋಡಿ. ನಮ್ಮ ಊರಿನಲ್ಲಿ ಇದ್ದಾಗಿನ—ಸ್ಪಷ್ಟವಾಗಿ, ನಾಚಿಕೆ ಬಿಟ್ಟು ಹೇಳುವುದಾದರೆ, ನಾನು ಊರಿನಿಂದ ಓಡಿಹೋದ ಕಾಲದ ಮಾತು. ಆಗೊಮ್ಮೆಗೆ ನಮ್ಮ ಸರ್ವನಾಶ ಆಯಿತೆಂದು ತಿಳಿದಿದ್ದೆ. ಊರಲ್ಲಿ, ದೊಡ್ಡ ಮನೆತನದ ಮರ್ಯಾದಸ್ಥರ ಮಗನೆಂದು, ಹೇಳಿಕೊಂಡು, ತಲೆಎತ್ತಿ ತಿರುಗುತ್ತಿದ್ದವನಿಗೆ, ತಲೆಯ ಮೇಲೆ ಸಿಡಿಲೆರಗಿತು. ವಜ್ರಪಾತವಾಯಿತು. ಒಂದು ಕಾಲದಲ್ಲಿ,—ಬೇರೆ ಬ್ರಾಹ್ಮಣರು, ಈಗ ಸಂಪನ್ನರಾಗಿ, ವೈಭವದಿಂದ ಇರುವವರು—ಒದ್ದೆ ಕೌಪೀನ ಕಟ್ಟಿಕೊಂಡು, ದಕ್ಷಿಣೆಗೆ ಹೋಗುತ್ತಿದ್ದಾಗ, ನಾವು ಬ್ರಾಹ್ಮಣರೇ ಆದರೂ, ಬಂಟರ, ಬಿಲ್ಲವರ ರಾಜ್ಯದಲ್ಲೂ, ದೊಡ್ಡ ತುಂಡರಸರು, ಕಾರುಬಾರಿಗಳು ಎಂದು ಅನ್ನಿಸಿಕೊಂಡಿದ್ದೆವು; ಬ್ರಹ್ಮಬಲಕ್ಕಿಂತ ಎರಡು ಪಾಲು ಭುಜಬಲ ತೋರಿಸಿ. ಇಂದಿಗೂ ಬ್ರಾಹ್ಮಣರನ್ನು "ಪುಳಿಕೊದ್ದೆಲ್" ಎಂದು ಹೀಯಾಳಿಸುವ ಬಂಟರು ನಮ್ಮ ಕುಟುಂಬದವರಿಗೆ; "ಓ, ಆ ರಾಯರ ಸುದ್ದಿಯೋ? ಮಾತಾಡಬೇಡ. ನಮಗೆ ಬೇಡವಪ್ಪಾ,! ಆ ಸಿಡಿಲ ಮರಿಗಳ ಸುದ್ದಿ," ಎನ್ನುತ್ತಿದ್ದರು. ನಮ್ಮ ಮುತ್ತಜ್ಜ ಸುಬ್ಬಣ್ಣರಾಯರು ಸೀಮೆಗೆ ಸರ್ದಾರ, ಪುಂಡರ ಗುರು ಕೂಡಾ. ಈಗ ನೋಡಿ! ಕಾಲಚಕ್ರ ತಿರುಗಿತು. ನಮ್ಮ ಮನೆ, ಮಾರು, ಆಸ್ತಿ ಪಾಸ್ತಿ, ಕಾಲಡಿಯ ನೆಲ, ಎಲ್ಲಾ ಮುಳುಗಿಹೋಯಿತು. ನನಗೆ "ರಾಯರು ಎಂಬ ಹೆಸರು ಕೂಡಾ ಅಳಿಯುವ ಕಾಲ ಬಂತು.

ನಮಗೂ ನಮ್ಮ ದಾಯಾದಿಗಳಿಗೂ ಹಿಂದಿನಿಂದ ಬಂದ ವೈರ. ಈ ಕೌರವ-ಪಾಂಡವರ ಬಾಂಧವ್ಯ ನಮ್ಮ ಕುಟುಂಬದಲ್ಲಿ ಆದಿಯಿಂದಲೇ ಇದ್ದುದು. ನಮ್ಮ ಹಿರಿಯರು ಅವರ ಹಿರಿಯರಿಗೆ ಬೇಕಷ್ಟು ಪೀಡೆ ಕೊಟ್ಟಿದ್ದರು. ಅವರೂ ಏನೂ, ಬಾಲಮುದುಡಿಕೊಂಡಿರುವ ಕಂದಮ್ಮಗಳಾಗಲೀ, ಸನ್ಯಾಸಿಗಳಾಗಲಿ ಆಗಿರಲಿಲ್ಲ. ಒಬ್ಬರೊಬ್ಬರ ಸರ್ವನಾಶಕ್ಕಾಗಿ ಸಮಯ

ಕಾಯುವದು ಕ್ರಮಾಗತವೇ ಆಗಿ ಹೋಗಿತ್ತು. ಆದರೆ, ನನಗೆ ಈ ಕಾದು ಬಾರೆಲ್ಲಾ ಆಗದು. ನಮ್ಮ ಹಿರಿಯರ ಹೆಬ್ಬುಲಿತನ ನನ್ನಲ್ಲಿರಲಿಲ್ಲ. ನಾನು ನನ್ನಷ್ಟಕ್ಕೆ, ಯಾರ ತಂಟೆಗೂ ಹೋಗದೆ, ದೇವರಿಗೆ ಸರಿಯಾಗಿ ನಡೆದು ಕೊಳ್ಳುವುದು, ಎನ್ನುವ ಜಡಭರತ.

ನಮ್ಮ ಮನೆತನಕ್ಕೂ ಮಾಪಿಳ್ಳೆಯರಿಗೂ ಪ್ರಾಚೀನ ಋಣಾನುಬಂಧ ಇದೆ. ನಮ್ಮ ಬಾಗಾಡಿ ಮೂಲದ ಮನೆ ಅಂದರೆ ಮಾಪಿಳ್ಳೆಯರ ಮಹಾ ಸಾಗರದಲ್ಲಿ ಒಂದು "ಬ್ರಹ್ಮದ್ವೀಪ"—ಒಂದೇ ಬ್ರಾಹ್ಮಣರ ಮನೆ. ನಮ್ಮ ಒಕ್ಕಲುಗಳು, ನಂಬಿಗೆಯ ಬಂಟರು, ಮನೆಗೆಲಸದ ಆಳುಗಳು, ಹೆಣ್ಣಾಳು ಗಳು ಕೂಡಾ ಮಾಪಿಳ್ಳೆಯರೆ. ನಮ್ಮ ಹಳ್ಳಿಕೊಂಪೆಗಳಲ್ಲಿ ವಿಶೇಷ ಭೇದ ಭಾವವಿರುವುದಿಲ್ಲ. ಆದರೂ ಈ ಜಾತಿಯನ್ನು ಆಳುವುದೆಂದರೆ ಸ್ವಲ್ಪ ಕಠಿನ. ಗಡಸುತನ, ರಟ್ಟೆಯಬಲ, ಮೈಯೆಲ್ಲ ಕಣ್ಣು, ಇರಬೇಕು. ನಂಬಲು ಕಷ್ಟ, ಅಂದರೆ ಹೊಟ್ಟೆಗಿಲ್ಲದೆ ನರಳುತ್ತಿರುವ ಪ್ರಾಣಿಗಳ ಮನುಷ್ಯತ್ವವನ್ನು ಎಷ್ಟು ಎಂದು ನಂಬಬಹುದು? ಹಾಗೆಂದರೂ ನಮ್ಮ ಮನೆತನಕ್ಕೂ ಅವರಿಗೂ ಹೇಗೋ ಹೊಂದಿಹೋಗುತ್ತಿತ್ತು. ಭುಜಬಲ ಪರಾಕ್ರಮಿಗಳಾದ ಗುತ್ತಿನ ಬಂಟರುಗಳು ಕೂಡಾ: "ಆ ಬ್ಯಾರಿಗಳ ಸಂತಾನ ಆ ಬಾಗಾಡಿಯವರಿಗೇ ಪೂರೈಸುವ ಬಾಬತು. ನಮಗೆಲ್ಲಾ ಪೂರೈಸಲಿಕ್ಕಿಲ್ಲ'' ಅನ್ನುತ್ತಿದ್ದರು.

ನಮ್ಮ ಮೂಲದ ಮನೆಯಿಂದ ನಮ್ಮ ಹಿರಿಯರು ತಳ ಕಿತ್ತು ಹೊರ ಹೋಗಿ, ತಲಾಂತರಗಳಾಗಿದ್ದುವು. ಆದರೂ, ಏನೋ ಅದನ್ನು ನೆನೆದೇ, ನಮ್ಮ ಆಸ್ತಿಯಲ್ಲಿ (ಭೂಮಿಯಲ್ಲಿ) ಒಂದು ಮಾಪಿಳ್ಳೆಗೆ ಬಿಡಾರಕೊಟ್ಟೆ. ಗದ್ದೆ ಗೇಣಿಗೆ ('ಲಾವಣಿ') ಮಾಡಿಕೊಂಡು, ಸಂಸಾರ, ಹೂಡಿದರು—ಹುಸಣೆ, ಇದಿನೆ, ಮತ್ತು, ಅಸಂಖ್ಯಾತ ಕುಟ್ಟಿಪಿಳ್ಳೆಗಳು. ನೆರೆಯವರೆಲ್ಲಾ ಎಚ್ಚರ ಕೊಟ್ಟಿದ್ದರು; "ನೋಡಿ, ಬೇಡಾ ನಿಮ್ಮಂಥ ಸಾಧು ಗೃಹಸ್ಥರಿಗೆ ಈ ಬ್ಯಾರಿ ಕಾಕಗಳ ಕಾಟ'' ಎಂದು. ನಾನು, "ಓ, ಅದು ನಮ್ಮ ವಂಶಕ್ಕೇ ಸಂದದ್ದು" ಎಂದು ಹೇಳಿ "ಏನು, ನಮ್ಮನ್ನು ತಿನ್ನುತ್ತಾರೆಯೇ" ಎಂದು ಕೊಂಡು, ಯಾರ ಮಾತೂ ಕೇಳದೆ, ಅವನಿಗೆ ಜಾಗಾಕೊಟ್ಟಿದ್ದೆ.

ಕೊಟ್ಟಿದ್ದೇನೋ ಸರಿ; ಆದರೆ, 'ಯಾಕಪ್ಪಾ, ಗೊತ್ತಿದ್ದವರ (ಬಲ್ಲ ವರ) ಮಾತು ಕೇಳದೆ ಹೋದೆ' ಎಂದು ನಾನೇ ಹಣೆ ಹಚ್ಚಿಕೊಳ್ಳುವಹಾಗೆ

ಮಾಡಿದರು, ಆ ಮಕ್ಕಳು. ನೆಲಸಿ ನಾಲ್ಕು ದಿನದಲ್ಲೇ ನಮ್ಮ ಹಲಸಿನ ಮರದಿಂದ ಕಡಿಗೆಗಳೆಲ್ಲಾ ದಿನೇ ದಿನೇ ಮಾಯವಾಗಲು ತೊಡಗಿತು. ನಮ್ಮದೇ ಹಿತ್ತಲಿನ ಸೌತೆಕಾಯಿ ನಮಗೇ "ಬೆಳೆಕಾಣಿಕೆ" ಯಾಗಿ, ಬ್ಯಾರಿ ಮಹಾಶಯನ ವರದಹಸ್ತ ಅಥವಾ ಮತ್ಸ್ಯಪಾತ್ರ (ಮೀನಿನ ಬುಟ್ಟಿ) ದಿಂದ ನಮಗೆ ಅರ್ಪಿತವಾಗುವಂತೆ ಆಯಿತು ನಮ್ಮಾಕೆ ತುಂಬಾ ಹರಟೆಕೊಳ್ಳು ತ್ತಿದ್ದಳು. "ಸರಿ, ಬೇಡಾ ಎಂದು ಅತ್ತುಕರೆದರೆ, ಈ ಪಿಶಾಚಿಗಳಿಗೆ ಬಿಡಾರ ಕಟ್ಟಿಕೊಟ್ಟಿರಿ. ಇನ್ನು ಮಕ್ಕಳಿಗೆ ಚಿನ್ನಾ ಹಾಕಿ ಹೊರಗೆ ಕಳಿಸಲಿಕ್ಕಿಲ್ಲ; ಬೈಹುಲ್ಲಿನ ಬಣವೆಗೂ ಬೀಗಹಾಕಬೇಕು. ಬಾವಿಯಲ್ಲಿ ಹಗ್ಗ-ರಾಟೆ ಇಡ ಲಿಕ್ಕೆ ಉಪಾಯವಿಲ್ಲ'' ಎಂದು.

ನಾನು "ಸತ್ತುಹೋಗಲಿ–ಮಗ! ಬರುವವರ್ಷ ಏಳಿಸುತ್ತೇನೆ" ಎಂದೆ. ಬರುವ ವರ್ಷದ ಒಳಗೇ ಇನ್ನೆಷ್ಟೋ ಹುಸಣೆ–ಇದಿಗೆಯರ ಮಹತ್ಕಾರ್ಯ ಗಳು ಜರಗಿದವು. ಅವರ ಚೌರ್ಯಕಾಂಡ ಊರಿಗೆಲ್ಲಾ ಪಸರಿಸಿತು. ಪೈಗಳ ಮನೆಯಲ್ಲಿ ಅವರ ಅಮ್ಮ ಹೊರಗೆ ಆರಿಸಿದ ಸೀರೆ, ರುಕ್ಕು ಹೆಂಗಸಿನ ಮಗಳ ಉಡಿದಾರ, ಕಾಲಿನ ಬೆಳ್ಳಿಯ ಕಡಗ, ಆಳ್ವರ ಹಿತ್ತಲಿನ ಮರದ ಕಾಯಿ, ಎಲ್ಲಾ ಯಾವ ದೆವ್ವವೋ ಮಾಯಕ ಮಾಡತೊಡಗಿತು. ಇನ್ನೂ, ಪುಂಡಾ ಟಿಕೆಗೂ ಹೆದರದ ಆಸಾಮಿಗಳು. ರೈಗಳು ತಮ್ಮ ಒಕ್ಕಲುಗಳನ್ನು ಕಟ್ಟಿ, ಅವನ ಒಂದು ಕಾಲೇನೋ ಮುರಿಸಿದರೂ, ಶನಿ ಮಹಾತ್ಮನ ಕಾಟ ಹೆಚ್ಚೇ ಆಯಿತೇ ವಿನಹಾ ಕುಂದಲಿಲ್ಲ. ಪೆಟ್ಟಿಗೆಪೆಟ್ಟು, ಸೊಂಟದಲ್ಲಿ ಚೂರಿ, ಎಲ್ಲಾ ಗೊತ್ತಿದ್ದ ಮಹಾಕದಿಮ. ಕಡೆಗೆ ಊರಿನವರ ಹಾಲ್‌ಹವಾಲಿ ತಡೆಯ ಲಾರದೇ—ಪೈಗಳ, ರೈತರ, ಆಳ್ವರ "ಸ್ವಾಮಿ, ನಿಮ್ಮ ಒಕ್ಕಲಿನವನಿಂದ ಊರಿಗೇ ಸುಖವಿಲ್ಲ. ಕಣ್ಣು ಮುಚ್ಚಿ ನಿದ್ದೆಮಾಡಲೂ ಸಾಧ್ಯವಿಲ್ಲ" ಎಂಬ ದೂರು ಕೇಳಿ ಕೇಳಿ, ಬೇಸತ್ತು ಒಂದು ದಿವಸ, ಕರೆಸಿದೆ ಹುಸಣೆಯನ್ನು.

ಅಂಗಳದಲ್ಲಿ ನಿಲ್ಲಿಸಿ, ಹತ್ತು ಜನರ ಸಮಕ್ಷಮ ವಿಚಾರಿಸಿದೆ. ಸುರು ವಿಗೆ ಶತ-ಸಹಸ್ರ ಆಣೆ ಹಾಕಿ, ತನ್ನ ನೂರು–ಪೀಳಿಗೆಯ ಪೂರ್ವಜರನ್ನೆಲ್ಲಾ ನಾಯಿ–ಕತ್ತೆ ಇತ್ಯಾದಿಗಳನ್ನಾಗಿ ಮಾಡಿ, ತನ್ನ ಮಾತಾಮಹೆಯಂದಿರ ನ್ನೆಲ್ಲಾ ಅಪಕೀರ್ತಿಗೆ ಗುರಿಮಾಡಿದ. ಕೊನೆಗೆ, ಕೊಬ್ಬಿದ ಕೋಣನಿಗೆ ಕೊರಡೇ ಮದ್ದು ಎಂದುಕೊಂಡು, ಬೆನ್ನಿಗೆ ನಾಲ್ಕು ಬಾರಿಸಿದಾಗ ಎಲ್ಲಾ

ಒಪ್ಪಿಕೊಂಡ. ಕೊಟ್ಟಷ್ಟು ಪೆಟ್ಟು, ನಾಯಿಯಂತೆ ತಿಂದ. ಸಾವಿರ ಆಣೆ ಹಾಕಿ, ಬೇರೆಯವರು ಉಗುಳಿದ ಬೀಡಿಗೂ ಕಣ್ಣು ಹಾಕುವದಿಲ್ಲವೆಂದು ನನ್ನ ಪಾದಮುಟ್ಟಿ ಮಾತುಕೊಟ್ಟ.

ಮಾತುಕೊಟ್ಟ ಮರುವಾರವೇ, ನನ್ನ ಬಾವಿಯ ರಾಟೆ-ಹಗ್ಗ ಕದ್ದು ಗುರುಪುರದಲ್ಲಿ ಮಾರಿದ. ನಾನು ಈ ಚಾಂಡಾಲನಿಗೆ ಬಿಸಿತಾಗದೆ ಬೆಣ್ಣೆ ಕರಗುವುದಿಲ್ಲವೆಂದು ಪೋಲೀಸರಿಂದ ಹಿಡಿಸಿ ಸಮನಾಗಿ ಸೇವೆ ಮಾಡಿಸಿ ಠಾಣೆಗೆ ಕಳಿಸಿದೆ. ಒಂದು ಆರು ತಿಂಗಳ ಮಟ್ಟಿಗೆ ಮಾವನ ಮನೆಯ ಸುಖ ಪ್ರಾಪ್ತಿ ಮಾಡಿಸಬೇಕೆಂದು, ನಮ್ಮ ಗುರುತಿನ ಪೋಲೀಸು ಇನ್‌ಸ್ಪೆಕ್ಟರರ ಕಿವಿಗೂ ಹಾಕಿದೆ. "ಮಗನಿಗೆ, ಬುದ್ಧಿ ಬರಲಿ," ಎಂದುಕೊಂಡೆ.

ಮಾರನೇ ದಿನ ನಾನು ಏಳುವುದಕ್ಕಿಲ್ಲ, ಅಂಗಳದಲ್ಲಿ ಒಂದು ಸಣ್ಣ ಸೇನೆ ಪಡೆಗಟ್ಟಿ ನಿಂತಿತ್ತು. ಅಳುವಿನ ಉದಯರಾಗ, ಅಮಂಗಳವಾದ್ಯ. ಇಡಿ ಪಡೆಯೇ, ಬಹಳ ಸ್ಫೂರ್ತಿಯಿಂದ ಕಿರಿಚುತ್ತಿತ್ತು. ಹುಸಣೆಯ ಹೆಂಡತಿ ಪಾತುಮ, ಅವನ ಅಗಣಿತ ಸಂತಾನಸ್ತೋಮ, ಇದಿನೆ, ಅವನ ಬೇಗಮುದ್ವಯರು, ಮತ್ತವರ ಪುತ್ರಕೋಟಿ, ಹಾಜರಾಗಿ, ವಿವಿಧ ಭಂಗಿಯಲ್ಲಿ, ವಿವಿಧ ವಿಶೇಷ ರಾಗಾವಳಿಗಳಲ್ಲಿ ಗೋಗರೆಯುತ್ತಿದ್ದರು. ಆರು ತಿಂಗಳ ಕೂಸಿನ "ಕೇಂ" ಕಿರಿಚಾಟದಿಂದ. ಇದಿನೆಯ ಸುಳ್ಳೇ ಸುಳ್ಳು ನಟನೆಯ ದೀನ ಗಾನ, ಪಾತುಮಾ ಬೀಬಿಯ ಕಿರುಚಾಟ, ಎಲ್ಲಾ ಕೂಡಿ ಉಂಟಾದ ಮಂಜುಳ ಕಲರವ, ಲಾವಾರಸದೋಪಾದಿ ನನ್ನ ಬಡ ಕರ್ಣರಂಧ್ರಗಳಲ್ಲಿ ಅಮೃತ ಸೇಚನಮಾಡುತ್ತಿದ್ದುವು ಈ ಕಾಟ ತಡೆಯಲಾಗಲಿಲ್ಲ. ಒಂದು ಗಂಟೆ ಹೊತ್ತು ಬೈದು, ಗರ್ಜಿಸಿ, ಎಚ್ಚರಿಕೆಕೊಟ್ಟು ಇನ್ನು ಅಪರಾಧ ಮಾಡಿದರೆ ಗಲ್ಲಿಗೆ ಕಳಿಸುತ್ತೇನೆ, ಪಾಶಿ ಶಿಕ್ಷೆ, ಎಂದು ಬೆದರಿಸಿ ಕಳಿಸಿದೆ. ಮತ್ತೆ ಇನ್‌ಸ್ಪೆಕ್ಟರಿಗೆ, "ಆ ಆಸಾಮಿಯನ್ನು ಬಿಟ್ಟುಬಿಡಿ; ಸಾಯಲಿ ಮೃಗ; ಕೇಸ್ ಮಾಡೋಲ್ಲ ನಾನು" ಎಂದು ಚೀಟಿ ಕೊಟ್ಟು ಕಳಿಸಿದೆ.

ಸಂಜೆಗೆ ಹುಸಣೆ ಮನೆಯ ಮುಂದೆ ಉಪಸ್ಥಿತನಾದ. ಪೋಲೀಸರು ಈಗಾಗಲೇ ಪೂಜೆನಡೆಸಿ, ಅವನ ಪೀತ ದಂತಪಂಕ್ತಿಗಳಲ್ಲಿ ನ್ಯೂನತೆಯನ್ನುಂಟುಮಾಡಿದ್ದರು. ಸವಡೆ ಕೂಡಾ, ಎಂದಿನಂತಿರುವುದಕ್ಕಿಂತ ತುಸು

ಸ್ಥೂಲವೂ, ಆರ್ದ್ರವೂ ಆಗಿತ್ತು. "ಹಾಗೇ ಅಲ್ಲ, ಇನ್ನೂ, ನಾಲ್ಕು ಬೀಳ ಬೇಕಿತ್ತು. ಭಾಷೆಬಾರದ ಮಗನಿಗೆ'' ಎಂದು, 'ಥೂ' ಎಂದು ಉಗುಳಿದೆ, ಅವನ ಎದುರಿಗೇ. "ಹೋಗುತ್ತೇನೆ ಅಯ್ಯ" ಎಂದು ಸಲಾಮು ಹಾಕಿ ಮೃಗ ಹೋಯಿತು.

ನಾಯಿ ಬಾಲ, ಡೊಂಕು ಡೊಂಕೇ. ಅದೇನೂ ಗತಿಯಿಲ್ಲದ, ಬಡ ತನದ ತಾಪದಿಂದ ಅಲ್ಲ, ಹುಟ್ಟುರೋಗ, ಮನೆಯಲ್ಲಿ ಗಂಜಿಗೆ ಹೇಗೂ ಕಡಿಮೆಯಿರಲಿಲ್ಲ. ಆದರೆ ಕದಿಯದೆ ನಿದ್ದೆ ಬೀಳದ ಪ್ರಾಣಿ ಅವ. ನಮ ಬಾಳೆ ಗೊನೆಗಳನ್ನು ದೆವ್ವ ಹೊರುವುದಾಗಲೀ ನಮ್ಮ ಬೈಹುಲ್ಲು ಅವನ, ಎತ್ತುಗಳ ಉದರಗತವಾಗುವುದಾಗಲೀ ನಿಲ್ಲಲಿಲ್ಲ. ಸರಿ ಇವನಿಗೆ ಉಚ್ಚಾಟ ನೆಯೇ ಮದ್ದು. ಬೇರೆ ಔಷಧಿಯಿಲ್ಲ, ಎಂದು, ಬರುವ ವರ್ಷ ಒಕ್ಕಲು ಬಿಡಬೇಕೆಂದೂ, ಬೇರೆ ಒಕ್ಕಲು ಹುಡುಕಬೇಕೆಂದೂ ಹೇಳಿದೆ. ಗೋಗ ರೆದು ಅತ್ತುಕರೆದ; ನಾನು ಅಲುಗಲಿಲ್ಲ.

ಆದರೆ, ಅವನನ್ನು ಹೊರಡಿಸಲು ನನಗೆ ಅವಕಾಶವೇ ಆಗಲಿಲ್ಲ. ಆ ವರ್ಷವಾಗುವುದರೊಳಗೇ ನನ್ನ ಬಿಡಾರಕ್ಕೇ ಸಂಚಕಾರ ಬಂತು. ನಮ್ಮ ದಾಯಾದಿಗಳು, ನಮ್ಮ ಅರೆಮರುಳಿನ ಚಿಕ್ಕಪ್ಪನವರಿಂದ, ಅವರಿಂದ ಇವ ರಿಂದ ನಮ್ಮ ಅತ್ತೆಯವರಿಂದ, ಒಕ್ಕಲುಗಳಿಂದೆಲ್ಲಾ, ಕೈಬೆಟ್ಟು ಮುದ್ರೆ ತೆಗೆದುಕೊಂಡು, ಏನೋ ಏನೋ ಪಾತಾಳಪಡ್ ಯಂತ್ರ ಮಾಡಿದರು. ನಾನೊಬ್ಬ ಬೋಧಾಳ ಶಂಕರ, ಬಲೆಯೊಳಗೆ ಸಿಕ್ಕಿಬಿದ್ದ ಮೇಲೆಯೇ ನಿದ್ರೆ ಕಳೆಯಿತು. ಕಳೆದಾಗ ಬೆಳಗಾಗಿತ್ತು. ನನ್ನ ಅಜಾಗರೂಕತೆ, ಇದ್ದವರಿ ಗೆಲ್ಲಾ ಬಾಯಿಮಾತಿನ ವಿಶ್ವಾಸದಲ್ಲಿ ಸಾಲ ಕೊಡುವ ದುರಾಭ್ಯಾಸ, ಕಣ್ಣು ಮುಚ್ಚಿ ದಸ್ಕತ್ತು (ರುಜು) ಹಾಕುವ ಉಪೇಕ್ಷೆ; ಮತ್ತು ನಮ್ಮ ದಾಯಾದಿ ಗಳ ಚಮತ್ಕಾರ. ಇವೆಲ್ಲಾ ಸೇರಿಕೊಂಡು ನನ್ನ ಸ್ಮಶಾನಯಾತ್ರೆ ಯಾದಂತಾಯಿತು. ಪೋಲೀಸರು ಹತ್ತು ದಿನದಲ್ಲೇ ಮನೆ 'ಜಪ್ತಿಗೆ' ಬರು ತ್ತಾರೆಂದು ನೋಟೀಸು ಬಂತು.

ಈಗ, ನನ್ನ ಕುಂಭಕರ್ಣ ನಿದ್ದೆ ತಿಳಿಯಿತು. ಅವಸರವಸರವಾಗಿ, ಇದ್ದಷ್ಟನ್ನು ಬಾಚಿಕೊಂಡು, ಊರು ಬಿಟ್ಟು ಓಡಿಹೋಗಬೇಕಾಯಿತು. ಆಭರಣ, ಚಿನ್ನ ಬೆಳ್ಳಿ, ಸಾಮಾನು, ಪಾತ್ರೆ ಪದಾರ್ಥ, ಹಳೇಕಾಲದ ಜರತಾರಿ

ಪೀತಾಂಬರ, ರೇಷ್ಮೆ, ಬಟ್ಟೆಗಿಟ್ಟೆಗಳನ್ನೆಲ್ಲಾ ಗಂಟು ಮೂಟೆ ಕಟ್ಟಿ ನನ್ನಾಕೆಯ ತಂಗಿಯ ಮನೆ—ಯಾರಿಗೂ ಗೊತ್ತಿಲ್ಲದ, ಕಾಡಿನ ಮೂಲೆ ಯಲ್ಲಿ ಅವಿತಂತೆ ಇರುವ—ನಾಯಿಮೊಗರಿಗೆ, ಸಾಗಿಸುವ ಹಂಚಿಕೆಮಾಡಿದೆ. ಸಾಮಾನು ಪಾತ್ರೆಗಳನ್ನು ಮಾರುವುದು ಸಾಗಲಿಲ್ಲ. ಪೋಲೀಸು, ಕಾನೂನ, ಕೋರ್ಟುಗಳ ಭಯ ಮತ್ತು ನಮ್ಮ ದಾಯದಿಗಳ ಒಳಸಂಚಿನಿಂದ, ನನಗೆ ಹಿಂದೆ, 'ರಾಯರೆ' 'ರಾಯರೆ', ಎಂದು ಹಲ್ಲು ಕಿರಿಯುತ್ತಿದ್ದ, ಮನುಷ್ಯ ರೆಲ್ಲರೂ 'ನಾಸ್ತಿ' ಅಂದು ಬಿಟ್ಟರು. ಒಕ್ಕಲಿನವರು, ಸಾಲ ಪಡೆದವರು, ಕಣ್ಣು ತಪ್ಪಿಸತೊಡಗಿದರು. ಮನೆಯಲ್ಲಿ ಕಣ್ಣೀರ ಮೋಡ ಕವಿದಿತ್ತು. ನಾನು, "ಅವರವರ ಧರ್ಮ, ಅವರನ್ನು ಕಾಪಾಡುತ್ತದೆ'' ಎಂದು ಬಾಯಲ್ಲೇನೋ ಹೇಳಿದೆ. ಕೈಕಾಲು ಮಾತ್ರ ಬಿದ್ದಂತಾಗಿತ್ತು, ಜೀವಾರ್ಥ ಹೋಗಿತ್ತು.

ಆದರೂ, ಜಪ್ತಿಗೆಂದು ಇಟ್ಟಿದ್ದ ದಿನಕ್ಕೆ ಎಂಟು ದಿನ ಮುಂಚೆಯೇ, ಗಾಡಿ ಕಟ್ಟಿ ನಿಲ್ಲಿಸಿದೆ ಆದಷ್ಟು ಸಾಮಾನು ತುಂಬಿಸುವುದು, ಅವಳ ತಂಗಿಯ ಮನೆ (ನಾಯಿಮೊಗರನಲ್ಲಿ) ಯಲ್ಲಿ ಹಾಕಿ, ನಾನು ಪರವೂರಿಗೆ ಪಲಾಯನ ಮಾಡುವುದು; ದೇವರು ಕಣ್ಣು ತೆರೆದಾಗ, ಪುನಃ ಸೇರುವುದು ಎಂದು ವಿಚಾರ ಇನ್ನೂ ಸಾಮಾನು ಕಟ್ಟಿಯಾಗಿರಲಿಲ್ಲ. ಎಲ್ಲಾ ಅಸ್ತವ್ಯಸ್ತ ವಾಗಿ ಬಿದ್ದುಕೊಂಡಿತ್ತು.

ಆಗಲೇ, ಬಿರುಗಾಳಿಗಿಂತ ಮುಂಚೆಯೇ ಸಿಡಿಲು ಬಡಿದಂತಾಯಿತು ನಮ್ಮ ಎದುರು ಕಡೆಯವರು, ಕೂಡಲೇ ಜಪ್ತಿಗೆಂದು ಪೋಲೀಸು ಕಳಿಸಿ ದರು. ತಾವು ತಮ್ಮ ಊರಲ್ಲೇ—ಎಂಟು ಮೈಲು ದೂರದಿಂದಲೇ, ಈ ಕಾರಸ್ಥಾನ ನಡೆಸುತ್ತಿದ್ದರು, ಈ ಪ್ರತಾಪಿಗಳು. — ನಮ್ಮ ಆಸ್ತಿಯಲ್ಲಿ ಕಾಲಿಡಲು, ಸ್ವಲ್ಪ ಸಂಕೋಚ, ಭಯ ಕೂಡಾ, ಪ್ರಾಯಶಃ.

ನಾನು ಒಳಗಿನಿಂದ, ಪಾತ್ರೆ ಪದಾರ್ಥ ತೆಗೆದು, ಯಾವುದನ್ನು ಬಿಡಲಿ, ಯಾವುದನ್ನು ಕೊಂಡು ಹೋಗಲಿ ಎಂದು ಯೋಚಿಸುತ್ತಾ ಇದ್ದೆ. ಅವಳು, ಮಕ್ಕಳನ್ನು ಎದೆಯ ಮೇಲೆ ಹಾಕಿಕೊಂಡು, ಒಳಗಿನ ಸೀರೆ ಬಟ್ಟೆ ಹಳೆಯ ಆಭರಣಗಳನ್ನು ಎದುರಿಗಿಟ್ಟುಕೊಂಡು ತಲೆ ಮೇಲೆ ಕೈ ಇಟ್ಟು ಕೊಂಡು ದಿಙ್ಮೂಢಳಾಗಿ ಕೂತಿದ್ದಳು.

ಅಷ್ಟರಲ್ಲೇ ಹುಸಣೆಯ ಕೋತಿ ಮುಖ ಗೋಚರಿಸಿತು. "ಅಯ್ಯೆ,

ಪೋಲೀಸು ಬಂದಿದೆ. ಕಟ್ಟೆಯ ಸಮೀಪ ನಿಂತು ದಾರಿ ಕೇಳುತ್ತಿದ್ದಾರೆ" ಎಂದು ಪಿಸುಗುಟ್ಟಿದ. ನನಗೆ ಎದೆ ಹಾರಿತು. ಮತ್ತೆ ಏನೋ ವೈರಾಗ್ಯವೂ ಆಯಿತು. ಆಗುವುದೆಲ್ಲಾ ಆಗಲಿ, ಹಣೆಯಲ್ಲಿ ಬರೆದ ಹಾಗೆ ಆಗುತ್ತದೆ ಎಂದುಕೊಂಡೆ. "ಅಯ್ಯ, ಸಾಮಾನು ಬೇಗ ಒಟ್ಟಿ. ಓಡಬೇಕು. ಹೊತ್ತಿಲ್ಲ" ಎಂದ ನಾನು ಅವನನ್ನು ದುರುಗುಟ್ಟಿ ನೋಡಿದೆ "ಕಳ್ಳ, ನನ್ನ ಸಂಕಟ ಕಾಲದಲ್ಲಿ, ನೋಡಿ ಹೊಟ್ಟೆತುಂಬಾ ಹಾಲು ಕುಡಿಯುತ್ತಿದ್ದಾನೆ. ಪಾಪಿ!" ಎಂದು ಹಲ್ಲುಕಡಿದೆ. ಪುನಹ ಅಷ್ಟರಲ್ಲೇ ಮಾಯವಾದ.

ನನ್ನಾಕೆ, ಕೇಳುತ್ತಿದ್ದವಳು—(ನಮ್ಮ ಕಷ್ಟಕಾಲದಲ್ಲಿ, ನೋಡಿ, ನಮ್ಮ ಆತ್ಮರಕ್ಷಣೆಗಿಂತಲೂ ಬೇರೆಯವರನ್ನು ಶಪಿಸುವುದೇ ಮನಸ್ಸಿನ ಪ್ರವೃತ್ತಿ)—"ಪಾಪಿ, ಓಡಿ ಹೋಗುತ್ತಿದ್ದಾನೆ ಪೋಲೀಸಿಗೆ ದಾರಿ ತೋರಿಸಲಿಕ್ಕೆ. ಕಾಫಿ ಕಾಸು ಕೊಟ್ಟಾರು. ಆ ಜಾತಿಗೆ ಅನ್ನಹಾಕಿ, ನೆಲಕೊಟ್ಟದ್ದಕ್ಕೆ ಸಾರ್ಥಕವಾಯಿತು'' ಎಂದು ನೆಲಕ್ಕೆ ಕೈ ಬಡಿದಳು.

ಅಷ್ಟರಲ್ಲೇ ನನಗೆ, ತುಸು ಚೇತನ ಬಂತು ಹಾಳಾಗಿ, ಸರ್ವನಾಶವೇ ಆಗಿ ಹೋದರೂ, ನಮ್ಮ ಸಾಹಸ, ನಾವು ಮಾಡುವುದು ಮಾಡಬೇಕು. ಮತ್ತೆ ದೇವರ ಕೈಯಲ್ಲಿ. ಬಿಲದಲ್ಲಿ ಹೆಗ್ಗಣವನ್ನು, ಮೆಣಸಿನ ಹೊಗೆ ಹಾಕಿ ಕೊಂದಂತೆ ಆಗಬಾರದು. ಹಿಡಿದರೆ ಹುಲಿಯನ್ನು ಹಿಡಿದು ತಂದಂತೆ ತರಲಿ, ಎಂದುಕೊಂಡು ಅವಳಿಗೂ ಹುರಿದುಂಬಿಸಿ ಗಾಡಿಗೆ ಸಾಮಾನು ತುಂಬಲು ಸುರುಮಾಡಿದೆ. ಅದೇ ಹೊತ್ತಿಗೆ, ಮಾಪಿಳ್ಳೆಯ ಬಿಡಾರದಿಂದ ಪಾತುಮಾಬಿ, ಅವಳ ಪಿಳ್ಳೆಗಳು, ಎಲ್ಲಾ ಬಂದು, ಸಾಮಾನು ಗಾಡಿಯಲ್ಲಿ ಹೇರಲು ಆರಂಭಮಾಡಿದುವು. ನನ್ನಾಕೆ,—"ಬಂದಿದ್ದಾವೆ, ಮಾರಿಗಳು, ಸಮಯ ನೋಡಿ, ಕದಿಯುವಾ ಎಂದು. ಕಳ್ಳರ ಸಂತೆಯೇ ಕೂಡಿದೆ. ತಿಂದು ಸಾಯಲಿ ಪೋಲೀಸರ ಬಾಯಿಗೆ ಹೋಗುವ ಗಂಟು, ಇವೇ ಮುಕ್ಕಲಿ; ನಂದನ ಬದುಕು ನರಿನಾಯಿ ತಿಂದುಹೋಯಿತಂತೆ'' ಎಂದು ಹುಬ್ಬುಗಂಟಿಕ್ಕಿ ಗೊಣಗಿದಳು. ಆ ಪ್ರಾಣಿಗಳು ಚಕಾರವೆತ್ತದೆ, ಸಾಮಾನು ತುಂಬುತ್ತಿದ್ದರು.

ಅಷ್ಟರಲ್ಲೇ ಒಂದು ವಿಪತ್ತಿನೊಳಗೆ ಇನ್ನೊಂದು ಸಂಕಟ ಉದ್ಭವವಾಗಬೇಕೆ? ಹುಣ್ಣಿನ ಮೇಲೆ ಬೊಕ್ಕೆ. ಗಾಡಿಗೆಂದು ಮಾಡಿದ್ದ ಐತಪ್ಪನಿಗೆ

ಪೋಲಿಸರನ್ನು ಕಂಡು ಭೂತ ಸಂಚಾರವಾದಂತಾಗಿತ್ತು. ''ರಾಯರೆ, ಇದೊಂದು ಮಾಪಿ ಮಾಡಬೇಕು. ನಾನು ನಿಮ್ಮ ಮಗ. ಹೆಂಡತಿ ಮಕ್ಕಳಿದ್ದವ. ಪೋಲೀಸರಬಾಯಿಗೆ ಬಲಿಹಾಕಬೇಡಿ'' ಎಂದು ಕೊಟ್ಟ ಹಣವನ್ನು ಅಲ್ಲೇ ಇಟ್ಟು ಕಣ್ಮರೆಯಾದ. ನನಗೆ ದಿಗ್ಭ್ರಾಂತಿಯಾಗಿ ತಲೆಯ ಮೇಲೆ ಕೈಯಿಟ್ಟು ಕಣ್ಣು ಮುಚ್ಚಿ ಕೂರುವದರಲ್ಲಿದ್ದೆ. ಅವಳು ಐತಪ್ಪ ಹೋದುದನ್ನು ಕಂಡು, ಎತ್ತಿದ ಬೆಳ್ಳಿಯ ಪಾತ್ರೆಯೊಂದನ್ನು ಅಲ್ಲೇ ಕುಕ್ಕರಿಸಿ ಕೆಳಹಾಕಿದಳು.

ಇದಿನೆ, ಸಾಮಾನು ತುಂಬುತ್ತಿದ್ದವನು ನೋಡಿದ, ಕೇಳಿದ,''ಸ್ವಾಮಿ, ಇದೊಂದು ದೊಡ್ಡ ಜಂಬರವಲ್ಲ, ಗಾಡಿ ನಾನು ಹೊಡೆಯುತ್ತೇನೆ. ಸಾಮಾನು ತುಂಬಿಸಿದರೆ ಸಾಕು, ಅವಸರ ಮಾಡಿ'' ಎಂದ

ನನ್ನಾಕೆಗೆ ಸಿಟ್ಟು, ದುಃಖ ಎರಡೂ ಕೂಡಿಬಂದಿದ್ದವು. ''ಈ ಮಾಪಿಳ್ಳೆಯ ಕೈಯಲ್ಲಿ, ನಮ್ಮ ಜೀವವನ್ನು ,ಇದ್ದುದು ಎಲ್ಲವನ್ನು ಕೊಡುವುದರ ಬದಲು ಪೋಲಿಸರಿಗೇ ಕೊಟ್ಟರೆ ಆಗದೆ? ಹಗಲು ಕಂಡ ಬಾವಿಗೆ ರಾತ್ರಿ ದುಮುಕಬೇಕೆ? ಈ 'ಕಂಡು' (ಕಳ್ಳ)ವಿನ ವ್ಯಾಪಾರ ಬೇಡ" ಅಂದಳು. ನನಗೆ ಪ್ರಜ್ಞಾಶೂನ್ಯನಹಾಗೆ ಆಗಿಹೋಗಿತ್ತು. ಆಚೆ ಈಚೆ ನೋಡಿದೆ. ಇದಿನೆ ಹೇಳಿದ: ''ಸ್ವಾಮಿ; ಸುಮ್ಮಣೆ, ಸಂಸಯಮಾಡಬೇಡಿ, ಹಾಗೆ ಮಾಡಿದರೆ ಹುಸಣೆ ನನ್ನನ್ನು ವುಗಿದೇ (ಹುಗಿದೇ) ಬಿಟ್ಟಾನು.''

ಸರಿ. ಇಡಿ ಮುಳುಗಿದವನಿಗೆ ಚಳಿಯೇನು? ಪೋಲಿಸಿನವನೇನು ಬ್ಯಾರಿಗಿಂತ ಮೇಲೋ? ದೇವರಿದ್ದಾನೆ, ನಾನು ಮಾಡಿದ ಧರ್ಮವಿದೆ ಬ್ಯಾರಿ, ನಡುನೀರಿನಲ್ಲಿ ಮುಳುಗಿಸುವುದಾದರೆ ಕತ್ತು ಕೊಯ್ಯುವದಾದರೆ ದೇವರ ಇಚ್ಛೆ, ಜೈಲಿನಲ್ಲಿ ಆಯುಷ್ಯ ಕಳೆಯುವದಕ್ಕಿಂತ ಮೇಲಷ್ಟೇ ಅಂದುಕೊಂಡು ಇದ್ದಬಿದ್ದಷ್ಟು ಸಾಮಾನು ಒಳಗೆ ತುಂಬಿಸಿ ಹೊರಡಲು ತಯಾರಾದೆವು.

ಅಷ್ಟರಲ್ಲೇ, ನಮ್ಮ ಹುಡುಗ ನಾರಾಯಣ ''ಅಪ್ಪ, ಪೋಲೀಸರು ಈಚೆಗೆ ಬರುತ್ತಿದ್ದಾರೆ. ಹುಸನೆ ಅವರ ಎದುರಿಗೆ, ಅವರನ್ನು ಕರೆದುಕೊಂಡು ಬರುತ್ತಿದ್ದಾನೆ" ಎಂದು ಹೆದರಿದ ಕಣ್ಣರಳಿಸಿ ಹೇಳಿದ. ನಮ್ಮಾಕೆ, ಇದಿನೆಯನ್ನು, ಮಾಪಿಳ್ಳೆ ಪರಿವಾರವನ್ನೂ, ಕಣ್ಣಿಂದ ಕಿಡಿಹಾರಿಸುತ್ತಾ ನೋಡಿ ಹೇಳಿದರು: "ನೋಡಿದರಲ್ಲಾ: ಈ ಗುಲ್ಮಘಾತಕರ ಚಮತ್ಕಾರ? ನಾವು ಓಡಿ ಹೋಗದಂತೆ ಕಾವಲಿರಿಸಿದ್ದಾನೆ ಇಲ್ಲಿ ಜನರನ್ನು—ಉಪ್ಪು ಉಂಡು

ಕುತ್ತಿಗೆ ಕೊಯ್ಯುವವ!—ಬೇಕುಬೇಕೆಂದೇ ಹಾವನ್ನು ಸಾಕಿದಿರಿ.” ನಾನು “ಅಯ್ಯೋ! ಸುಮ್ಮನಿರಿ ನಾವು ಹೇಗೂ ನಾಶವಾಗಿ ಹೋಗುತ್ತೇವಂತೆ. ಈ ಬಡ ಪಾಪಿಗಳಾದರೂ, ಪೋಲೀಸಿನ ಕೈಯಿಂದ ನಾಲ್ಕು ಕಾಸು ತಿನ್ನಲಿ, ನಮಗೇಕೆ ಹೊಟ್ಟೆಯುರಿ, ನಮ್ಮ ಜೀವನವೇ ಉರಿಯುತ್ತಿರುವಾಗ?’’ ಎಂದೆ. ನಾವು ಏನು ಹೇಳಿಕೊಂಡರೂ ಅವುಗಳು ತಮ್ಮ ಕೆಲಸ ಬಿಡಲಿಲ್ಲ. ಇದಿನೆ ಎತ್ತುಗಳನ್ನು ಗಾಡಿಗೂ ಹೂಡಿದ. (ನಮ್ಮೂರಿಗೆ ಬಸ್ಸಿನ ಹಾದಿಯಿಲ್ಲ ಎಲ್ಲಾ ಗಾಡಿಯ ‘ರೋಟು’) ನನಗೂ ಮೈಯೆಲ್ಲಾ ಉರಿಯಿತು. ಆದರೆ ಹಾಲಾ ಹಲದ ವಿಷದೆದುರಿಗೆ ಇದೊಂದು ಚೇಳು ಕಡಿತ; ಮಾತನಾಡಲಿಲ್ಲ.

ಸರಿ. ಇನ್ನೇನು ಪೋಲೀಸು ಒರಲಿದೆ; ನಮ್ಮದೆಲ್ಲಾ ಪುರಾಣ ಮುಗಿಯಿತು. ನನಗೆ ಜೈಲು ಪ್ರಾಪ್ತಿ. ನನ್ನನ್ನು ನಂಬಿದವರಿಗೆ ಮಡಿಕೆ ಕೋಲು, ಎಂದುಕೊಂಡು, ತಲೆಯಮೇಲೆ ಕೈಯಿಟ್ಟು, ಹಲ್ಲು ಕಚ್ಚಿ ನಿಂತಿದ್ದೆ. ಅವಳು ಮಕ್ಕಳನ್ನು ತಬ್ಬಿಕೊಂಡು ನಿಂತಿದ್ದಳು. ಎತ್ತುಕಟ್ಟಿದ ಗಾಡಿ, ಎದುರೆಲ್ಲಾ ಸಾಮಾನು ತುಂಬಿಕೊಂಡು ನಿಂತುಕೊಂಡಿತ್ತು—ನಮ್ಮ ಜೀವನದ ಪ್ರೇತದಂತೆ.

ಪೋಲೀಸರು—ಅದೋ!—ಬಂದರು. ಮನೆ ಎದುರಿನ ಗೇಟಿಗೆ ಬಂದಾಯಿತು........ಎದುರಿಗೇ ಆ ಪಾಪಿ ಹುಸನೆ!........ಆದರೆ, ಎಲೆಲ! ಒಳಗ ಬರಲಿಲ್ಲ! ಪೋಲೀಸರು, ಸೀದಾ ಓಣಿ ಹಿಡಿದು, ಮುಂದೆ ಮುಂದೆ ಹೋಗುವುದು ಕಂಡಿತು. ಮುಂದೆ ಹೋಗಿ, ನಮ್ಮ ಕರಂಬಾರಿನ ಅಣೆ (ಇಳಿತ) ದಾರಿ ಹಿಡಿಯುವುದೂ ಕಂಡಿತು. ನನಗೆ ಏನೂ ಅರ್ಥವಾಗಲಿಲ್ಲ.

ಈಚೆನಿಂದ, ಇದಿನೆ; “ಧನಿ ಕೂತುಕೊಳ್ಳಿ ಬೇಗ, ಹೊತ್ತಿಲ್ಲ. ರಾತ್ರಿಯೊಳಗೆ ನಾಯಿಮೊಗರಿಗೆ ಮುಟ್ಟಬೇಡವೆ? ದೂರ ರಾಶಿ ಇದೆ; ಅಮ್ಮ, ಹತ್ತಿ ಕೂತುಕೊಳ್ಳಿ,’’ ಎಂದು ಹೇಳಿ, ಮಕ್ಕಳಿಬ್ಬರನ್ನು ಎತ್ತಿ ಕೂರಿಸಿದ. ನನ್ನಾಕೆ ಸಂಶಯ—ಭಯದಿಂದ ನನ್ನ ಕಡೆಗೆ ನೋಡಿದಳು. ನಾನು ಮಂತ್ರಬದ್ಧನಂತೆ ಹತ್ತಿಕೂತೆ. ಅವಳೂ ಬಂದಳು. ನನ್ನ ಕಿವಿಯಲ್ಲಿ “ಆ ಚೂರಿ, ಕೈಯಲ್ಲಿ ತೆಗೆದಿಟ್ಟುಕೊಳ್ಳಿ, ಬ್ಯಾರಿ! ಏನೋ ಏನೋ? ನಂಬಬಾರದು,” ಎಂದಳು. ಗಾಡಿ ಹೊರಟಿತು.

ನಮ್ಮ ಎದೆ ಬಡಿತದಷ್ಟೇ ವೇಗವಾಗಿ ಓಡಿಸಿ ಇದಿನೆ, ನಾಯಿ

ಮೊಗರಿಗೆ ತಂದುಬಿಟ್ಟ. ನಮಗೆ ಒಮ್ಮೆಗೆ, ಉಸ್ಸಪ್ಪ! ತಾಯಿ ಹೊಟ್ಟೆಯಿಂದ ಪುನಃ ಬಂದೆವು ಎಂಬಂತಾಯಿತು. ಮಾರ್ಗ ಉದ್ದಕ್ಕೂ ಇದಿನೆಯ ಕಡೆಯೇ ಶಂಕೆಯಿಂದ ನೋಡುತ್ತಿದ್ದೆವು. ಅವ ಭೂತಹಿಡಿದವನಂತೆ ಎತ್ತಿಗೆ ಹೊಡೆದು ಹೊಡೆದು ಓಡಿಸುತ್ತಿದ್ದ. ಮಾರ್ಗ ಉದ್ದಕ್ಕೂ ಯಾರೂ ಮಾತಾಡಿರಲಿಲ್ಲ.

ನಾಯಿಮೊಗರಿನಲ್ಲಿ ನಮ್ಮನ್ನು ಬಿಟ್ಟು, ಇದಿನೆ, ಬೇರೆ ಯಾವುದೋ ದಾರಿಯಿಂದ ಹಿಂದೆ ಹೊರಟ. ನನ್ನಾಕೆಯ ಭಾವನೆಂಟನಲ್ಲಿ ಸಾಮಾನೆಲ್ಲಾ ಹಾಕುತ್ತಿರುವಾಗ, ಅವರು, "ಗಾಡಿಯವ ಏನಪ್ಪ? ಮಾಪಿಳ್ಳೆಯ ಹಾಗೆ ಕಾಣುತ್ತಿದ್ದನಲ್ಲಾ! ಬೇರೆಯವರನ್ನು ಗಾಡಿ ಹೊಡೆಯಲು ಕರಕೊಂಡು ಬರಬಾರದಿತ್ತೆ?" ಎಂದು ಸ್ವಲ್ಪ ಅಂಜಿಕೆಯಿಂದಲೂ, ತುಸು ಬೇಸರದಿಂದಲೂ ಅಂದರು. ಪಾಪ! ನಮ್ಮ ಆಪತ್ತಿನಿಂದ ಅವರಿಗೂ ಇಲ್ಲದ ಪ್ರಾಣ ಸಂಕಟ.

ದೇವರ ದಯೆಯಿಂದ ನಾನು ಪಾರಾಗಿ ಹೋದೆ. ಬೊಂಬಾಯಿ, ಪೂನೆ, ನಾಸಿಕ, ಎಲ್ಲೆಲ್ಲಿ, ತಲೆತಪ್ಪಿಸಿಕೊಂಡು, ಹೆಸರು ಬದಲಾಯಿಸಿ ಇದ್ದೆ. ಅವಳು ನಾಯಿಮೊಗರಿನ ಆ ಮೂಲೆಯಲ್ಲಿಯೇ ಅಜ್ಞಾತವಾಸ ಮಾಡಿಕೊಂಡಿದ್ದಳು. ಅವಳು ನನಗೆ ಕಾಗದ ಬರೆದಿದ್ದಳು. ಅವಳ ದುಃಖ ತೋಡಿಕೊಂಡನಂತರ: "ಹಾಲು—ಗೀಲು ಕುಡಿಯಿರಿ. ದೇಹದ ಜಾಗ್ರತೆ ನೋಡಿಕೊಳ್ಳಿ. ಇಲ್ಲಿ ಹೇಗೂ, ಅವರ ಹಂಗಿನಲ್ಲೇ ಇದ್ದುದರಲ್ಲೇ ಸುಖದಲ್ಲಿದ್ದೇವೆ. ಮಗು ನಿಮ್ಮನ್ನು ಕೇಳುತ್ತಾನೆ. ಏನೆಂದು ಹೇಳುವುದೆಂದು ಗೊತ್ತಾಗುವುದಿಲ್ಲ. ಸಾಮಾನು, ಚಿನ್ನ, ಆದಷ್ಟು ಮಾರಿ, ನಿಮಗೆ ಹಣ—ಇದೋ—ಕಳಿಸಿದ್ದೇನೆ. ದೇವರ ದಯದಿಂದ, ನಮ್ಮ ಅದೃಷ್ಟ ಪುನಃ ಬೆಳಗಬೇಕು. ಸಾವಿತ್ರೀವ್ರತ ಮಾಡುತ್ತಿದ್ದೇನೆ. ಕಟೀಲು ಅಮ್ಮ (ದುರ್ಗಾಂಬಿಕೆ) ನಿಗೂ ಪೂಜೆ ಹೇಳಿಕೊಂಡಿದ್ದೇನೆ.

"ಮತ್ತೆ, ಮೊನ್ನೆ ನಮ್ಮ ಊರಿನಲ್ಲಿ ಆದ ಕತೆ ಗೊತ್ತೇ? ಮೊನ್ನೆ ನಮ್ಮ ಹೊಲೆಯ ಚೋಮ ಏನೋ ಪತ್ರ ಹುಡುಕಿಕೊಂಡು ಬಂದಿದ್ದವ ಸಿಕ್ಕಿದ; ಹೇಳಿದ ಪೋಲೀಸರು ಬಂದಿದ್ದರಲ್ಲಾ,—ಅವರಿಗೆ, ಹುಸನೆ ದಾರಿ ತೋರಿಸುತ್ತೇನೆ ಎಂದು ಕರೆದುಕೊಂಡು ಹೋದನಂತೆ. ಸೀದಾ, ನಮ್ಮ ಮನೆ

ದಾಟಿ, ಕಡಂಬಾರಿನ ಆಣೆ ಇಳಿಸಿ, ಕಡಂಬಾರು ತೋಡಿನ ಎದುರು ನಿಲ್ಲಿಸಿದ ನಂತೆ—"ದಾಟಬೇಕು; ಮೂರು ಆಳು ಆಳವಿದೆ." ಎಂದು ಹೆದರಿಸಿ, ದೋಣಿ ತರುತ್ತೇನೆಂದು ದೋಣಿಯವನ ಮನೆ ಕಡೆಯೆಂದು ಹೊರಟು ಮಾಯ ವಾದನಂತೆ. ಪೋಲೀಸಿನವರು ಗಂಟೆಕಟ್ಟಲೆ ಕಾದು, ಹೊಳೆ ದಾಟಿ (ಅದ ರಲ್ಲಿ ನೀರು ಕುತ್ತಿಗೆಯವರೆಗೆ ಮಾತ್ರವಷ್ಟೆ) ಪಾಪಂಜೂರಿಗೆ ಹೋಗಿ, ಅಲ್ಲಿ ವಿಚಾರಿಸಿದಾಗ, ಹುಸನೆಯ ಇಂದ್ರಜಾಲ ತಿಳಿದು, ಹಿಂದೆ ಬಂದರಂತೆ. ಮನೆಯಲ್ಲಾ ಸೂರೆಯಾಯಿತೆನ್ನುವ. ಆದರೆ, ದೇವರೆ, ನಮ್ಮನ್ನು ಉಳಿಸಿದ. ಆ ಚಿನ್ನ ಗಿನ್ನ ತರದಿದ್ದರೆ, ಏಸು ಅವಸ್ಥೆಯಾಗುತ್ತಿತ್ತು ನಮ್ಮದು ......... ಮತ್ತೆ ಹುಸನೆಯ ಕತೆ ಕೇಳಿ. ಅವನನ್ನು ಪೋಲೀಸಿನವರು, ಹುಡುಕಿ, ಹಿಡಿದು, ಹೊಡೆದು ಹೊಡೆದು, ಹಣ್ಣುಮಾಡಿ, ಠಾಣೆಗೆ ಕೊಂಡು ಹೋಗಿ, ಹಿಂದೆ ಬರುವಾಗ್ಯೆ, ಇನ್ನೊಂದು ಕಾಲನ್ನೂ ಅರ್ಧ ಮುರಿದುಹಾಕಿ ಕಳಿಸಿದ ರಂತೆ. ಅದೊಂದು ದೊಡ್ಡವಲ್ಲ ಅನ್ನುವಾ. ಪೆಟ್ಟುತಿಂದು ಅವನಿಗೆ ಸಡ್ಡಾಗಿರ ಬೇಕು ಅನ್ನಿ. (ಪ್ಪೆಯುಂಡು ಹೋಗು).....ಆ ಬ್ಯಾರಿ.....ಶುದ್ಧ ಘಟಿಂಗ. ನಮಗಾಗಿ ಇಷ್ಟು ಫಜೀತಿ ಪಟ್ಟದ್ದು ಆಶ್ಚರ್ಯವಪ್ಪ. ಅವನಿಗೇಕಪ್ಪಾ ಹುಟ್ಟಿತು, ನಮ್ಮಲ್ಲಿ ಮಮತೆ, ಆ ಕದಿಮನಿಗೆ?.....'' ಇತ್ಯಾದಿ.

ನನಗೆ ಮನಸ್ಸಿನಲ್ಲಿ ಹೇಗೋ, ಹೇಗೋ ಆಯಿತು. ಯಾವ ಗಿಡದ ಬೇರು ಯಾವುದಕ್ಕೆ ಮದ್ದೋ ಎಂದು ದೇವರೇ ಬಲ್ಲ. ಅಂದುಕೊಂಡೆ: ಪ್ರಪಂಚ ದೊಡ್ಡ ಅದ್ಭುತವಪ್ಪಾ! ಇಲ್ಲವಾದರೆ ಆ ಶುದ್ಧ ಘಟಿಂಗ, ನನ್ನ ಬಾಳನ್ನು ಉಳಿಸಬೇಕಾಯಿತೆಂದರೆ..ಅದೂ ತನ್ನ ಕಾಲು ಮುರಿದುಕೊಂಡು..!

ತುಂಬಾ ದುಃಖ ದಾರಿದ್ರ್ಯ ಎಲ್ಲಾ ಸಹಿಸಿದೆ. ನಮ್ಮ ಚಿನ್ನ ಆಭರಣ ಮಾರಿ, ವ್ಯಾಪಾರ-ಸಾಪಾರ, ಎಂದು ಹೇಗೋ ಉದರ ಭರಣಮಾಡಿಕೊಂಡು ಇದ್ದೆ. ಹೇಗೋ ಮೊನ್ನೆ ಮೊನ್ನೆ ದೇವರು ಕಣ್ಣು ತೆರೆದ. ಈಗ ಸಾಧಾ ರಣದ ಭಂಡಸಾಲೆ (ಮಳಿಗೆ) ತೆರೆದಿದ್ದೇನೆ—ನಾಸಿಕದಲ್ಲಿ. ಅವಳನ್ನೂ ಮಕ್ಕಳನ್ನೂ ಕರೆಸಿಕೊಂಡು ಇದ್ದೇನೆ.

ಹೇಳಿದೆನಲ್ಲಾ....ದೇವರು ಮೊನ್ನೆ ಮೊನ್ನೆ ಕಣ್ಣು ತೆರೆದುದು ಎಂದು. ಕೈಯಲ್ಲಿ ನಾಲ್ಕು ಕಾಸು ಕೂಡಿದ ಕೂಡಲೇ, ದೇವರನ್ನು ನೆನೆದು ಒಂದು ಮುನ್ನೂರು ರೂಪಾಯಿ ಹೇಗೋ ಕೂಡಿಹಾಕಿ, ಅವಳ ಭಾವನೆಂಟನಿಗೆ

ಕಳಿಸಿದೆ; "ದಯುವಿಟ್ಟು, ನಮ್ಮ ಊರಿನ ಹುಸಣೆ ಎಂಬ, ಅರ್ಧ ಕಾಲು ಮುರಿದ ಮಾಪಿಳ್ಳೆಯೊಬ್ಬನಿಗೆ, ನನ್ನಿಂದ, ಎಂದು ಮುಟ್ಟಿಸಬೇಕು. ಹಿಂದೆ ನಮ್ಮ ಒಕ್ಕಲಾಗಿದ್ದ. ನಮ್ಮ ಆಪತ್ತಿಗೆ ಒದಗಿದವ....." ಎಂದು ಬರೆದೆ, ಅವರಿಗೆ ಸಲ್ಲುವ ಇತರ ಕೃತಜ್ಞತಾ ಸಮರ್ಪಣೆಯೊಡನೆ.

ಅವರಿಂದ ರೂಪಾಯಿ ಹಿಂದೆ ಬಂತು. ಕಾಗದ ಬಂತು: "ನೀವು ಹೇಳಿದ ಆಸಾಮಿ ಊರಲ್ಲಿಲ್ಲ....ಬಹಳ ದೂರದಲ್ಲಿ, ಅಂದರೆ ಅಂದಮಾನಿನಲ್ಲಿದ್ದಾನೆ. ಶುದ್ಧ ಫಟಿಂಗನಂತೆ! ...ನೀವು ಹೇಳುವುದು ಕೇಳಿ ಆಶ್ಚರ್ಯವಾಗುತ್ತದೆ. ನಮ್ಮ ಊರಿನಲ್ಲಿ ರೈಗಳನ್ನು ಹೊಡೆದು, ಮತಿ ತಪ್ಪಿಸಿ ಹಾಕಿದರಲ್ಲಾ, ಆ ಕೇಸಿನಲ್ಲಿ ಈ ಪೋಕರಿಯೂ ಸೇರಿಕೊಂಡಿದ್ದನಂತೆ. ಕಾಲಿರಡೂ ಪೆಟ್ಟು ತಿಂದು ಚೊಟ್ಟಾಗಿದ್ದರೂ, ದೊಂಬಿ ಮಾಡುವುದರಲ್ಲಿ, ಪುಂಡಾಟಿಕೆಯಲ್ಲಿ ರುಸ್ತುಂ ಆಸಾಮಿಯಂತೆ. ಜನ್ಮಾವಧಿ ಟಾಪು ಶಿಕ್ಷೆ. ಪರಾಕ್ರಮ ತೋರಿಸಲಿ ಅಲ್ಲಿ ಮಗಾ. ಶುದ್ಧ ಫಟಿಂಗ!.....ಅವನ ಹೆಂಡತಿ ಮಕ್ಕಳೂ, ಅವನ ಅಣ್ಣನೂ, ಊರುಬಿಟ್ಟು, ಎಲ್ಲಿಗೋ ವಲಸೇ ಹೋಗಿದ್ದಾರೆ."

*"The ways of God are strange*
*but the ways of Man are stranger."*

---

**ಸೂಚನೆ :** ಮಾಪಿಳ್ಳೆ=ಮಾಪಿಳ್ಳೆಯವರು ನಮ್ಮ ಊರಿನ, ಮುಸಲ್ಮಾನರಲ್ಲಿ, ಅತಿ ದರಿದ್ರ ಜಾತಿ. ಒಂದು ವಿಧದ ಹರಕು ಮುರುಕು ಮಲೆಯಾಳಿ ಮಾತನಾಡುತ್ತಾರೆ. ಇವರಿಗೂ ಮೇಲುಜಾತಿಯ 'ಸಾಬಿ' ಗಳಿಗೂ ಸಾಮಾಜಿಕ ಸಂಬಂಧ (ಮದುವೆ, ನಂಟು) ಇಲ್ಲ.

# ಭೀಮಸೇನ ಹೆಂಗರುಳನ್ನು ಕಂಡುದು

ನನ್ನ ಗೆಳೆಯ ಗೃಧ್ರರಾಜ ಮಹಾ ಒರಟ. ಪರಮಾತ್ಮ ತನ್ನ ಜ್ಞಾನಾ ನೆಲ್ಲ ಮರೆತು ಬಿಟ್ಟು ಈ ಪ್ರಾಣಿಗೆ ಆರಡಿ ಗಾತ್ರ ಮತ್ತು ಭೀಮಸೇನ ಸದೃಶ ಕೋಮಲ ದೇಹಲತೆಯನ್ನು ದಯಪಾಲಿಸಿರೋ ಕಾರಣದಿಂದ ಆತನ "ಸಿಪಾಯಿಗಿರಿ", ಮಹತ್ಕಾರ್ಯಗಳಿಗೆ ಮಿತಿಯಿಲ್ಲ ಬಾಯಿ ಮಾತ್ರ ಪಟಾಕಿ. ಮಾತಿಗಿಂತಲೂ ಮಸಾಲೆ, ಉಪ್ಪು ಖಾರ ಹೆಚ್ಚು. ಏನೇ ಆಗಲಿ, ಮಹಾರಾಯ ಅದ್ಭುತವಾದ ಪತ್ರ ಬರೀತಾನೆ ಅದೊಂದರಿಂದ, ಒಂದು ಸಣ್ಣ ತುಣುಕು ನೋಡಬಾರದೆ? :

" ........ಕೊನೆಗೆ, ನಮ್ಮಪ್ಪನ ಸಹನೆ ವೇದಾಂತಗಳ ಕಡಲೂ ಬತ್ತಿಹೋಯಿತು. ನ್ಯಾಯವೇ ಅನ್ನು. ಬೆಳೆದು ಸೈಂಧವನಂತಿದ್ದ ನಾನು ದಿನಕ್ಕೆ ಮೂರು ಬಾರಿ ಸಿಂಡಗಬಳಿಸಿ, ಹೊಟ್ಟೇ ಹೊರೆದು, ಬೀದಿ ಬೀದಿ ಅಲೆದು, ಅನ್ನ ದಂಡ, ಭೂಮಿಗೆ ಭಾರವಾಗಿದ್ದುಕೊಂಡರೆ, ಯಾವ ತೀರ್ಥ ರೂಪರಿಗೂ ಕೆರಳೋದು ಸರಿಯೇ. "ಕೋಣನ ಹಾಗೆ ಬೆಳೆದು ನಿಂತಿದ್ದೀಯೋ? ಬೋಳಿಸಿದಷ್ಟು ಮೀಸೆ ಮತ್ತೆ ಚಿಗುರುತ್ತಿದೆ. ನಿನ್ನ ಅಪ್ಪನ್ನ ಎಷ್ಟು ಕಾಲ ದೋಚಿ, ಅವನ ಪೆನ್ಶನ್ನಿನ ಅನ್ನ ನೂರೆಮಾಡುತ್ತಿರುತ್ತೀಯೋ? ಮೂರಾಳಿನ ಗಾತ್ರದ ಭೂಪನಿಗೆ, ರೈಲ್ವೆ ಸ್ಟೇಷನಿನಲ್ಲೋ, ಸೌದೇ ಡಿಪೋ ದಲ್ಲೋ ಕೂಲಿ ಮಾಡಿದರೂ ಹೊಟ್ಟೆಹೊರೆಯಬಹುದು. ಏನಿಲ್ಲದಿದ್ದರೆ, ಬೆನ್ನು ಬಗ್ಗಿಸಿ, ಬೆವರು ಹರಿಸಿ, ದುಡಿಯಲು ಮೈ ಬಗ್ಗದಿದ್ದರೆ, ಪೋಸ್ಟ್ ಆಫೀಸಿನಲ್ಲಿ ನಿಂತು, ನಾಲಗೇ ಚಾಚು. ಚಿಲ್ಲರೆ ಕಾಸಾದರೂ ಜೇಬಿಗೆ ಎಸೆದಾರು ಪುಣ್ಯಾತ್ಮರು'' ಎಂದು ನಮ್ಮಪ್ಪ ಗುಡುಗಿದ ನಮ್ಮಮ್ಮನೂ ಇದಕ್ಕೆ ದನಿಗೂಡಿಸಿದಳು.

ಅಯ್ಯೋ! ಕಾರ್ಲ್ ಮಾರ್ಕ್ಸ್! ( ನಾನು ನಾಸ್ತಿಕನಾದ ನಂತರ ಭಗವಂತಾ, ಪರಮಾತ್ಮಾ ! ಯಾ ಖುದಾ ! ಯಾ ಅಲ್ಲಾ! ಎಂದು ಉದ್ಗರಿಸೋದನ್ನ ಬಿಟ್ಟಿದ್ದೇನೆ) ಎಂದು ನಿಟ್ಟುಸುರಿಟ್ಟೆ. ಕೂಡಲೇ, ಮೀಸೆ ಹೊತ್ತ (ಅಂದರೆ, ಬೋಳಿಸಿದ) ಗಂಡಸಾಗಿ, ಹೀಗೆ ಹೀನಾಮಾನವಾಗಿ

ಭೀಮಾರಿ ಕೇಳಿಕೊಂಡು, ಅಪ್ಪಅಮ್ಮಂದಿರ ಕೂಳಿಗೆ ಬಿದ್ದಿರೋದು ಅಸಹ್ಯ ಎಂದುಕೊಂಡು ಓಡಿದೆ--ಪಬ್ಲಿಕ್ ರೀಡಿಂಗ್ ರೂಮಿಗೆ (ವಾಚನಾಲಯಕ್ಕೆ). 'ಹಿಂದೂ' ವನ್ನು ಯಾರೋ ಒಬ್ಬನ ಕೈಯಿಂದ ಸೆಳೆದುಕೊಂಡು (ನಾನು ಸೈಂಧವನಂತೆ ಬೆಳದಿದ್ದುದರಿಂದ ಇದೊಂದು ಸಾಹಸದ ಕಾರ್ಯವಲ್ಲ) 'ವಾಂಟೆಡ್' ಕಾಲಮನ್ನು ಪಾರಾಯಣ ಮಾಡಿದೆ. ಬೇಕಷ್ಟು 'ಬೇಕು' ಗಳೇನೋ ಇದ್ದುವು. ಆದರೆ ನನ್ನಲ್ಲಿ, ಇಂಟರ್ ಮೀಡಿಯೆಟ್-ಪಲಾಯನ ಮತ್ತು ಭೀಮಕಾಯಗಳ ಹೊರತಾಗಿ ಬೇರೇನೂ ಯೋಗ್ಯತೆ ಇರಲಿಲ್ಲ

ಅಲ್ಲಲ್ಲಿ ಹುಡುಕಿದ ಮೇಲೆ ಕೊನೆಗೆ ಆ ಅಮಾವಾಸ್ಯೆಯ ಪತ್ರಿಕಾ ಕಾಶದಲ್ಲಿ ತಾರೆಯೊಂದು ಕಾಣಿಸಿಕೊಂಡಿತು. ಉಸ್ಸೆಂದುಕೊಂಡು ಓದಿದೆ. ಮಲೆನಾಡಿನ ಒಂದು ಮೂಲೆಯಲ್ಲಿ ಮರದ ಡಿಪೋನಲ್ಲಿ, ಒಬ್ಬ ಗುಮಾಸ್ತ-ತಥಾ ಜವಾನ-ಏವಂ ಸಹ ಮ್ಯಾನೇಜರನ ಸ್ಥಾನವೊಂದು ರಾರಾಜಿಸುತ್ತಿತ್ತೆಂದು ಆ ಜಾಹೀರಾತು ಘೋಷಿಸುತ್ತಿತ್ತು. ಮ್ಯಾಟ್ರಿಕ್ಯುಲೇಷನ್ ಎಂಬ ಭವಸಾಗರಾನ ಪಾರು ಮಾಡಿದ, ಮಲೇರಿಯಾ ಆದಿಗಳೆದುರಾಗಿ ಕೆಚ್ಚಿನಿಂದ ಕಾದಬಲ್ಲ, ಒಳ್ಳೇ ಮೂಳೆ ಮಾಂಸವಿರುವ ಧೃಷ್ಟ ಪುಷ್ಟ ವ್ಯಕ್ತಿಯು ........ನೇ ತಾರೀಖು, ... ...ಘಂಟೆಗೆ, ಸದ್ರೀ ಆಫೀಸಿನಲ್ಲಿ ಉಪಸ್ಥಿತನಾದ ಪಕ್ಷಕ್ಕೆ, ಐರಾವತವು ಒಲಿದು ಹೂಮಾಲೆಯನ್ನು ಆತನ ಕೊರಳ ಮೇಲೆ ಹೇರಬಹುದು ಎಂದು ತಿಳಿದು ಬಂತು.

ಸರಿ! ನಾನೇ ಈ ಪದವಿಗಾಗಿ ಜನ್ಮವೆತ್ತಿದವನೆಂಬ ಅದ್ಭುತವಾದ ಆತ್ಮವಿಶ್ವಾಸವುಂಟಾಯಿತು ನನಗೆ. ಮನೆಗೆ ನಾಗಾಲೋಟದಿಂದ ಓಡಿ, ನನ್ನ ಪೆಟ್ಟಿಗೆ ಬಿಚ್ಚಿ, ಹೊಸ ಸೂಟುಗಳನ್ನೆಲ್ಲ ಎಳೆದು, ರಣರಂಪ ಮಾಡಿ, ನನ್ನ ಭೀಮ ಶರೀರವನ್ನು ಅವುಗಳ ಒಳಗೆ ಬಲಾತ್ಕಾರದಿಂದ ತುರುಕಿಸಿ ಅಮ್ಮನ ಕೈಯಿಂದ ಒಂದಷ್ಟು ರೂಪಾಯಿ ಇಸಕೊಂಡು, ಅಪ್ಪನ ಕಡೆಗೆ ರೀತಿ ಗರ್ವಗಳಿಂದ ನೋಡಿ, ಆಶೀರ್ವಾದಕ್ಕೆ ಕಾಯದೇ, ಬಸ್ ಹತ್ತಿ ಬಂದೆ—ಆ ಮಲೆನಾಡಿನ ಕಾಡುಗುಡ್ಡೆಯೆಡೆಯಲ್ಲಿ ಅವಿತಿದ್ದ ಕೊಂಪೆಗೆ.

ನಾನು ಒಳ್ಳೇ ಠೀವಿಯಲ್ಲೇ ಹೊರಟಿದ್ದೇನೆಂತಲೂ, ಸಣ್ಣ ಆನೆಮರಿಯಂಥಾ ದೇಹ ವೈಶಾಲ್ಯವಿದೆಯೆಂತಲೂ ಮುಂಚೆಯೇ ತಮ್ಮಲ್ಲಿ ವಿಜ್ಞಾಪಿಸಿಕೊಂಡಿದ್ದೇನೆ. ನಾನಾ ಆಫೀಸಿನ ಹತ್ತಿರ ಬರುತ್ತಲೇ ಒಂದು ಸಣ್ಣ ಸೇನೆ

ನನ್ನನ್ನು ಮುತ್ತಿಕೊಂಡಿದು. ಎಲ್ಲರೂ ಒಳ್ಳೇ ಅಲಂಕಾರವಾದ ಬಟ್ಟೆ ಹಾಕಿಕೊಂಡು, ಚೊಕ್ಕಟವಾಗಿ ತಲೆ ಬಾಚಿಕೊಂಡು, ಸಜ್ಜಾದ ಭೂಪತಿಗಳೇ. ಆದರೆ ನಿರುದ್ಯೋಗಿಗಳಾಗಿ ಭೂಭ್ರಮಣ ಮಾಡಿದುದರ ಗುರುತೆಲ್ಲ ಆ ಬಡಪಾಯಿ ಜೋಲು ಮುಖಗಳಲ್ಲಿ ತುಂಬಿದ್ದುವು. ಹೆತ್ತೆಂಟು ಶಿಫಾರಸು ಪತ್ರಗಳು, ಒಂದೆರಡು ಡಜನ್ 'ಸರ್ಟಿಫಿಕೇಟು' ಗಳು ನನ್ನ ಕಣ್ಣೆದುರು ಕುಣಿಸಲ್ಪಟ್ಟುವು. ಈ ಉರುದ್ಯೋಗಿ ನಿದ್ಯೋಗಾನ್ವೇಷಕರ ಚಕ್ರವ್ಯೂಹವನ್ನು ಭೇದಿಸಿ, ನೆಟ್ಟಗೆ ಗರ್ಭಗುಡಿ, ಅಂದರೆ ಆಫೀಸಿನೊಳಗೆ ಪ್ರವೇಶವಂ ಗೈದೆ. ನನ್ನ ಠೀವಿಯನ್ನು ಕಂಡು ತೂಕಡಿಸುತ್ತಾ ಇದ್ದ ಜವಾನ ಎದ್ದು ಸಲಾಮು ಸಮರ್ಪಿಸಿದ. ಅದಬಿನಿಂದ ಸ್ವೀಕರಿಸಿ, ಸಾಹೇಬರೆಲ್ಲೆಂದು ವಿಚಾರಿಸಲಾಗಿ ಅವರು ಇನ್ನೂ ಬಂದಿಲ್ಲವೆಂದೂ, ಬೆಳಗಿನ ಹೊತ್ತನ್ನೆಲ್ಲ ತಮ್ಮ ಮಗಳಿಗಾಗಿ ಗಂಡು – ಬೇಟೆಗಾಗಿಯೇ ವಿನಿಯೋಗಿಸುತ್ತಾರೆಂದೂ ಜವಾನ ಅರಿಕೆ ಮಾಡಿದ. ಸರಿ, ಇಲ್ಲಿ ಕೂತು, ಈ ಬಡಪಾಯಿಗಳ ಒಟ್ಟಿಗೆ ಕಾದಾಡಿದರೆ 'ಅಲ್ಪರ ಸಂಗ, ಅಭಿಮಾನ ಭಂಗ' ಎಂಬಂತಾದೀತು ಎಂದೂ, ಆಫೀಸರ ನನ್ನು ಮನೇಲೇ ಕಂಡು, ಈ ಪ್ರಾರ್ಥಿಗಳಿಗಿಂತ ಮುಂಚೇನೇ ಕೆಲಸಾ ದಕ್ಕಿಸಿಕೊಳ್ಳಬೇಕೆಂದೂ ಸಾಹೇಬರ ರಾಜಪ್ರಾಸಾದದ ಕಡೆಗೆ ಹೊರಟೆ.

ಆಫೀಸರರ ಹೂಲ್ಲುಂಬೆಳೆದ ಅಂಗಳಕ್ಕೆ ಕಾಲಿಟ್ಟೊಡನೇ, ಒಳಗಿಂದ, ಆರ್ಭಟೆ, ತರ್ಜನೆ ಗರ್ಜನೆಗಳ ಘನಘೋರನಿನಾದ ಕೇಳಿಸಿತು. ಒಮ್ಮೆಲೆ ಹಿಂದೆ ಜಾರಿ, ''ನಾಯಿಗಳು; ಜಾಗ್ರತೆ!'' ಎಂಬ ತಲೆ ಹಲಗೆಯಿದೆಯೇ ಎಂದು ನೋಡಿದೆ. ಇರಲಿಲ್ಲವಾದುದರಿಂದ, ಮೆತ್ತನೇ, ಒಂದಿಷ್ಟು ಅಂಜುತ್ತಂಜುತ್ತ, ಜಗಲಿಗೆ ಕಾಲಿಟ್ಟೆ.

ಆಗ ತಿಳಿಯಿತು–ಒಳಗಿನ ಆರ್ಭಟೆ–ಚೀತ್ಕಾರಗಳು ಶ್ವಾನಗಳ ಸ್ವಾಗತ ಗಾನವಲ್ಲವೆಂದೂ, ಎರಡು ಸ್ತ್ರೀಕಂಠಗಳ ಮಧುರಮಿಲನವೆಂದೂ.

ಒಂದು ವೀಣಾ ಮಂಜುಳ ಘೋರನಿನಾದ–''ಸುಮ್ಮನಿರೇ! ತಾಟಕೀ ದಿನವಿಡೀ ಕದನಕ್ಕೆ ಕಾಲುಕೆದರಿಯೇ ಇರುತ್ತೀಯಲ್ಲಾ! ನನ್ನ ಹೊಟ್ಟೇಲಿ ಹೇಗೆ ಹುಟ್ಟಿದಿಯೇ ಶೂರ್ಪನಖೀ! ನನಗೆ ಸಾಕಾಯಿತಪ್ಪಾ ನಿನ್ನನ್ನು ಆಳಿಕೊಂಡು. ಒಮ್ಮೆ ಮನೆಯಿಂದ ದಾಟಿಸಿ, ಯಾರೊಬ್ಬ ಹತಭಾಗ್ಯನ ಕುತ್ತಿಗೇಗೆ ಕಟ್ಟಿ, ಹಾಯಾಗಿರುತ್ತಿದ್ದೆನೇ ಭಗವಂತಾ .......!"

ಇನ್ನೊಂದು ಸುಮಧುರ, ಕೋಕಿಲಸಮ ಕರ್ಣಕಠಾರಿ, :"ಹಯ್ಯೋ! ಪಾಪವೇ! ಅಮ್ಮಾ! ನೀ ಮಾಡಿದ ಕರ್ಮ ಬಲವಂತವಾದರೆ ನಾ ಮಾಡುವು ದೇನು? ನಿನ್ನ ಹೊಟ್ಟೇಲಿ ಹುಟ್ಟಲೀಬೇಕೂಂತ ನಾನೇನು ಅಹೋ ರಾತ್ರಿ ತಲೆಕೆಳಗಾಗಿ ನಿಂತು ತಪಸ್ಸು ಮಾಡಲಿಲ್ಲ! ಯಾಕೆ ಬೇಕಿತ್ತು? ನನ್ನನ್ನ....ಶೂರ್ಪನಖೀನ . ಹೊತ್ತು ಹೆತ್ತು ಬೆಳೆಸೋ ಕರ್ಮ? ಈಗ ಅನುಭವಿಸಬೇಕಮ್ಮಾ. ಯಾರೋ ಬಿಕನಾಶಿ ಮುಟ್ಠಾಳ ಗಂಡಸಿನ ಕುತ್ತಿ ಗೇಗೆ ಕಟ್ಟೋಕೆ, ಯಾರೋ ಪರದೇಶಿಯ ಜೋಳಿಗೇಗೆ ಎಸೆಯಲಿಕ್ಕೆ ನಾನೇನು ಹರಕು ಚಿಂದಿಯಲ್ಲಾಮ್ಮ, ಹಿಡೀ ಅಕ್ಕೀನೂ ಅಲ್ಲಾ. ನನ್ನ ಖುಶೀ ಇರೋವಷ್ಟು ಕಾಲ ನನ್ನ ಅಪ್ಪನ ಮನೇಲಿ ಇರುತ್ತೇನೆ. ಹೊತ್ತು ಹೆತ್ತ ಪಾಪಕ್ಕೆ ಪ್ರಾಯಶ್ಚಿತ್ತ ಅನುಭವಿಸೂ ಊ ಊ.... ...

ಮೊದಲನೆಯ ಕಲಕಂಠ: ನಿನ್ನಿಂದ ಸುಖವಿಲ್ಲವಪ್ಪಾ! ಎಷ್ಟು ಕಾಲ ಈ ಯಾತನೇನೋ, ಕಿರುಕುಳಾನೋ. ಬಂದ ಬಂದ ವರಗಳನ್ನೆಲ್ಲಾ ಹೆದರಿಸಿ ಓಡಿಸುತ್ತೀಯಲ್ಲೇ ಹಿಡಂಬೀ! ನಿನ್ನ ಮೀಸೆಯಿಲ್ಲದ ಗಂಡಸುತ ನಾನ್ನ ಕಂಡು ಆ ಹಸುಗೂಸು ಮೀಸೆ ಬೋಳಿಸಿದ ಹೆಣ್ಣುತನದ ಗಂಡುಗಳು, ಮೂರ್ಛೇ ಹೋಗಿ, ಎಚ್ಚತ್ತು ಕಾಲಿಗೆ ಬುದ್ಧಿ ಹೇಳುತ್ತಾರಲ್ಲೇ ಹುಡುಗೀ! ಊರಲ್ಲೆಲ್ಲ ನೀನು ಮಹಾಕಾಳಿ, ರಣಚಂಡಿ ಎಂದು ಪ್ರತೀತಿಯಾಗಿ ಬಿಟ್ಟಿವೆ ನಮ್ಮಪ್ಪಾ! ನಿನ್ನಾ, ಹಿಡಂಬೀನ ಯಾವ ಭೀಮಸೇನ ಕೊಂಡುಹೋಗಿ ಯಾನೋ ಭಗವಂತನೇ ಬಲ್ಲಾ ... ..."

ಈ ಪ್ರೇಮಪೂರಿತ, ಸ್ನೇಹಸ್ನಿಗ್ಧ ಸರಸಸಲ್ಲಾಪ, ನನಗೆ ಬಹಳ ರುಚಿ ಸಿತು. ಮೊದಲನೆಯದಾಗಿ, ಹೆಂಗರುಳಿನ ವಾತ್ಸಲ್ಯ, ಮತ್ತು ಪುತ್ರಿಯ ಮಾತೃ ಪ್ರೇಮಗಳಿಂದ ಉಕ್ಕಿ ಹರಿಯುತ್ತಿದ್ದ ಮನಮೋಹಕ ವಾಕ್ಯಸರಣಿ ನನ್ನ ಮನೋಪಾಷಾಣವನ್ನು ಪುಲಕಿತಗೊಳಿಸಿತು. ಎರಡನೆಯದಾಗಿ, ಈ 'ಹಿಡಿಂಬ'ಗೆ 'ಭೀಮಸೇನನೇ' ತಕ್ಕ ವರನೆಂಬ ಮಾತು ನನ್ನನ್ನು ಆಕರ್ಷಿಸಿತು. ನನಗೇ ತಿಳಿಯದೆ, ಎದೆಯುಬ್ಬಿಸಿಕೊಂಡೆ. ನನ್ನ ದಪ್ಪವಾದ ತೋಳುಗಳನ್ನು ಸವರಿಕೊಂಡೆ. ಅದರ ಮೇಲೆ ಭೀಮಸೇನನಿಗೆ ಯೋಗ್ಯ ವಾದ ರೀತಿಯಲ್ಲಿ, ಹೂಂಕರಿಸಿ, ಶೀಳೆಟ್ಟು ಗಟ್ಟಿಯಾಗಿ ಕೆಮ್ಮಿ, ಕೊನೆಗೆ "ಮನೇಲಿ ಯಾರಿಲ್ಲವೇ" ಎಂದು ಘನಗಂಭೀರವಾಣಿಯಲ್ಲಿ ಉದ್ಘೋಷಿಸಿದೆ.

ಬಾಗಿಲು ತೆರೆಯಿತು. ಒಳಗಿಂದ, ಒಣಗಿದ ಕಳ್ಳೀ ಗಿಡದೋಪಾದಿಯಾಗಿ ಮುಳ್ಳು ಮುಳ್ಳಾಗಿ, ಗಂಟು ಗಂಟಾಗಿ, ಸಿಡುಕು ಮೋರೆಯ, ಹರಿತ ಮೂಗಿನ, ಹದ್ದಿನ ಕಣ್ಣಿನ, ನಡು ವಯಸ್ಸಿನ ಮಹೀಳಾಮಣಿಯೋರ್ವಳೂ (ಹೆತ್ತು ಹೊತ್ತು ಸಲಹಿದ ಮಾತೆಯಾಗಿರಬೇಕು), ರಬ್ಬರ್ ಚೆಂಡಿನ ಹಾಗೆ ದುಂಡಗಾಗಿ, ಉರುಟಾಗಿ, ಕಲ್ಲು ಗುಂಡಿನಂತೆ ಉಬ್ಬಿಕೊಂಡು, ರಕ್ತ ಮಾಂಸದಿಂದ ತುಂಬಿತುಳುಕುತ್ತಿರುವ ದುಂಡು ಗಲ್ಲವನ್ನುಳ್ಳ ತರುಣೀರತ್ನವೊಂದೂ (ಮಾತೃವತ್ಸಲಳೂ, ಮಂಜುಭಾಷಿಣಿಯೂ ಆದ 'ಹಿಡಿಂಬೀ' ದೇವಿಯಾಗಿರಬೇಕು) ಸಾಕ್ಷಾತ್ಕಾರವಾದರು.

ನಾನು ಗಂಭೀರವಾಗಿ ನನ್ನ ಆರಡಿ ಗಾತ್ರವನ್ನು ಪ್ರದರ್ಶಿಸಿದ ಕೂಡಲೇ, ಮಿಂಚು ಹೊಳೆದಂತೆ, ಕಾಳಗಮುಗ್ಧ ಹೆಂಗಸರಿಬ್ಬರ ಚರ್ಯೆಯೇ ಬೇರೆಯಾಯಿತು. ಕಾಳ್ಗಿಚ್ಚಿನಂತಿದ್ದ ಮಾತೃದೇವಿ, ಒಮ್ಮೆಲೇ ಉಪಚಾರ, ಆತಿಥ್ಯ ಸೂಸತೊಡಗಿ, ಸಾಕ್ಷಾತ್ ಗೃಹಲಕ್ಷ್ಮಿಯೇ ಆಗಿಬಿಟ್ಟರು. "ಕೂತುಕೊಳ್ಳಿರಿ. ಅವರು ಹೊರಗೆ ಹೋಗಿದ್ದಾರೆ. ಬಾಯಾರಿಕೆ ತರುತ್ತೇನೆ. ಒಂದು ಕ್ಷಣ ಕೂತಿರಿ. ಬಹಳ ದಣವಾಗಿದೆಯೇ? ಏನೂ ಸಂಕೋಚ ಪಡಬೇಡಿ. ನಿಮ್ಮದೇ ಮನೇ ಅಂತಾ ... ..."

ಕೂಡಲೇ ಮಗಳ ಕಡೆಗೆ ತಿರುಗಿ, ವಾತ್ಸಲ್ಯದಲ್ಲಿ ಅದ್ದಿದ ಸ್ವರದಲ್ಲಿ "ಬಾರಮ್ಮ, ಕಂದಾ, ಒಳಗೆ ಬಾರೇ," (ಪಿಸು ಮಾತಿನಲ್ಲಿ ಚೀತ್ಕರಿಸುತ್ತ: "ಸ್ವಲ್ಪ ಒಳಗೆ ಬಂದು, ತಲೆಬಾಚಿಕೊಳ್ಳಬಾರದೇ? ಕೂದಲು ರಾಕ್ಷಸಿ ಕೂದಲಿನ ಹಾಗೆ ಕೆದರಿಕೊಂಡಿದೆ. ಸೀರೇನಾದರೂ ಬದಲಾಯಿಸಬಾರದೇ?")

ಕುಮಾರಿ "ಹಿಡಿಂಬಿ" (ಸದ್ಯಕ್ಕೆ ಅದೇ ನಾಮಧೇಯವಿರಲಿ—ಮುಂದಕ್ಕೆ ಬೇರೆ!) ಒಂದೆರಡು ನಿಮಿಷ ನನ್ನ ಕಡೆಗೆ ಹುಬ್ಬುಗಂಟಿಕ್ಕಿ, ದುರುಗುಟ್ಟಿ ನುಂಗುವವಳಂತೆ, ರಣಭೈರವಿಯ ಭಂಗಿಯಲ್ಲಿ ನೋಡಿದಳು. ನಾನೂ ಮೂರ್ಛೆಹೋಗದೆ, ತತ್ತರಿಸದೆ ಎದೆನೀರಾಗದೆ, ನನ್ನ ಅಪ್ಪಟ್ ಭೀಮಸೇನೀಮರ್ಜಿಯಲ್ಲಿ, ಅತಿ ಪ್ರಸನ್ನ ಮುಖ ಮುದ್ರೆಯಿಂದ, ಬಾಯ್ತುಂಬಾ ನಸುನಗುತ್ತಾ ಕೂತೆ. ಗಂಟಿಕ್ಕಿದ ಹುಬ್ಬುಗಳು ಸಡಲಿದುವು.

ಮಿಂಚಿನಂತೆ ಅಥವಾ ಬಂದೂಕಿನಿಂದ ಗುಂಡು ಹೊರಟಂತೆ, ಒಳಗೆ ನುಗ್ಗಿದಳು.

ಎರಡನೇ ದೃಶ್ಯ. ಒಣಗಿದ ಕಳ್ಳಿಯೋಪಾದಿ ಸರ್ವಾಂಗಸುಂದರಳಾದ ಅಮ್ಮ ಮಾತೃಶ್ರೀ ಒಳಗೆ ಕಾಲುಗಂಟೆ ಹೊತ್ತು ಗಡಿಬಿಡಿ ಮಾಡುತ್ತಿದ್ದು, ತರುವಾಯ ಘಮಘಮಿಸುವ ತಿಂಡಿ ತಿನಿಸು—ಕಾಫಿ ತೀರ್ಥಗಳನ್ನು ತಟ್ಟೇಲಿ ಹೇರಿ, ಬಾಗಿಲ ಸಂದಿಯಲ್ಲಿ ತಂದಿಟ್ಟರು. ಭೀಮಸೇನನ ಮೂಗರಳಿತು. ಬಾಯಲ್ಲಿ ನೀರೂರಿತು. ಇನ್ನೊಂದು ಕ್ಷಣದಲ್ಲಿ ಕಣ್ಣು ಅರಳಿತು. ದುಂಡುಗಿನ, ಕಲ್ಲುಗುಂಡಿನಂಥ ಆ ಚೆಲುವೆ ಹುಡುಗಿಯ ಕೈಯ ಮೇಲೆ ತಾಯಿ ತಿಂಡಿತೀರ್ಥಗಳ ಹರಿವಾಣವನ್ನು ಹೇರಿ, ಅವಳ ಕೆದರಿದ ತಲೆಯನ್ನು ಸವರಿ, ಅವಳ ಸೆರಗನ್ನು ಸರಿಪಡಿಸಿ, ನನ್ನ ಕಡೆಗೆ ತಳ್ಳಲು ಪ್ರಯತ್ನಿಸುತ್ತಿದ್ದರು. ಹುಡುಗಿ, ಹುಬ್ಬುಗಂಟಿಕ್ಕಿ ಒದೆಯುವ ತುಂಟ ಕುದುರೆಯಂತೆ, ಕಾದಾಡುತ್ತಾ ಹಿಂದೆ ಸರಿಯುತ್ತಿದ್ದಳು.

ನಾನೊಂದೆರಡು ನಿಮಿಷ ಈ ನಾಟಕಾನ ನೋಡುತ್ತ ನಿಂತೆ. "ಅಯ್ಯೋ ನಿನ್ನನ್ನೇನು ಮಾಡಲೇ! ಮದುವೆಯಾಗದೆ ಗೊಡ್ಡಾಗಿ ಎಷ್ಟು ದಿನ ಇರುತ್ತೀಯೇ ಮಂಥರೆ!'' ಎಂದು ಮಾತೃದೇವಿ, ರೋಷಪೂರಿತ ಪಿಸು ಮಾತಿನಲ್ಲಿ ಬುಸುಗುಟ್ಟುವುದೂ ಕೇಳಿತು. ನನಗೂ ಕನಿಕರವಾಯಿತು. ಈ ವೃದ್ಧೆಯ ಸಹಾಯಕ್ಕೆ ಹೋಗುವುದು ನನ್ನಂಥ ಧೀರನ ಕರ್ತವ್ಯವೆಂದು ಮನಗಂಡು, ಮುಂದೆ ನಡೆದು, ಕಾದಾಡುತ್ತಿದ್ದ ಹಿಡಿಂಬೀ ದೇವಿಯ ಬಳಿ ಸಾರಿ ''ನಾಚಬೇಡಮ್ಮ. ನಾಳೆ ನಾವೆಲ್ಲ ಒಂದೇ ತಾನೆ.'' ಎಂದು ಮಹಾ ಅದ್ಭುತ ದಿಟ್ಟತನದಿಂದ ಹೇಳಿ, ಅವಳನ್ನು ಮೆತ್ತಗೆ ಬಲವಂತದಿಂದೆಳೆದು ತಂದು ಕೂರಿಸಿದೆ. ಅಲ್ಲದೆ ಆ ತಿಂಡಿ ತೀರ್ಥವನ್ನು ಜಾಗರೂಕತೆಯಿಂದ ಇಸಕೊಂಡು, ಇದಿರಿಗಿಟ್ಟು, ಹೋಮಕಾರ್ಯವನ್ನಾರಂಭಿಸಿದೆ.

ಹೌದೋ, ಬಾಗಲೋಡಿ, ಈಗ ನೆನಸಿದಾಗ, ನನ್ನ ಸಾಹಸ ಮತ್ತು ಮಾನಗೇಡಿತನವನ್ನು ನೆನಸಿ ಎದೆ ನಡುಗುತ್ತಿದೆ. ಈಗಲೋ! ಅಂಥಾ ಅದ್ಭುತ ಕಾರ್ಯವನ್ನು ಕನಸಿನಲ್ಲೂ ನೆನಸಲೂ ಸಾಧ್ಯವಿಲ್ಲಬಿಡು! ಈಗಲಂತೂ ಹೇಳೋದೇ ಬೇಡಿ. ಅವಳೆದುರಿಗೆ ಒಸೇ ಬದಿಯಲ್ಲಿ ಬೆಕ್ಕಿದ್ದ ಹಾಗೆ ಮುದುರಿರುತ್ತೇನೆ—ಇದೆಲ್ಲಾ ಮತ್ತಿನ ಮಾತು ಅನ್ನು.

ತಾಯಿಗೂ ಸಹಾ ಆಶ್ಚರ್ಯವೇ ಆಗಿರಬೇಕು. 'ಇದೆಲ್ಲಿಯ ರುಸ್ತುಂ ವರನಪ್ಪಾ' ಎಂದಿರಬೇಕು. ಆದರೆ, ಮತ್ತೆ, ತನ್ನ ಮಂಡೋದರಿಗೆ ಹೇಳಿ ದಂಥಾ ರಾವಣನೇ ಸಿಕ್ಕಿದಂತೆ ತೋರಿ, ಯಾರಿಗೂ ಬಾಗದ ಈ ಸಿಡಿಲಮರಿ ಹುಡುಗಿಯನ್ನು ಪಳಗಿಸಿದ ಜಗಜಟ್ಟಿಯನ್ನು ಕಂಡು ಸ್ವಲ್ಪ ಆದರ ಹುಟ್ಟಿರ ಬೇಕು. ಕದನ ಕಾಳಿ ಸೋತುದನ್ನು ಕಂಡು ಅವಳು ಹಿಗ್ಗಿರಬೇಕು.

ನನಗೆ ತುಂಬಾ ಹಸಿದಿತ್ತು. ಮತ್ತು ಈ ಮದುವೇ ವ್ಯಾಪಾರ, ನನಗೇನೂ ಸಂಬಂಧಿಸಿದ್ದಿಲ್ಲವೆಂದೂ, ಚೆನ್ನಾಗಿ ಗೊತ್ತು. ಇದೊಂದು ನಾಟಕದ ಎಡೆಯಲ್ಲಿ ಒಂದು ಪ್ರಹಸನ. ಸಿಕ್ಕಿದಷ್ಟೇ ಬಾಚಿ ಮುಕ್ಕಿಕೊಂಡು ಸಿಕ್ಕಿದ್ದೇ ಮಕ್ಕಳ ಪುಣ್ಯವೆಂದು, ಭಾಗ್ಯವನ್ನು ಹರಸಿಕೊಂಡು, ಹರಿವಾಣ ದಲ್ಲಿದ್ದದನ್ನೆಲ್ಲ ಗಬಳಿಸಿದೆ. ಅನಂತರ ಘಮಘಮಿಸುತ್ತಿದ್ದ ಹಂಡೆ ತುಂಬಾ ದಪ್ಪವಾದ ಕಾಫಿಯನ್ನು ಆಪೋಷಣೆ ಮಾಡಿದೆ. ಎಲ್ಲ ಬರಿದಾದನಂತರ, ಜೋರಾಗಿ ಉಸಿರುಗರೆದು ಮುಖ ಮೇಲಕ್ಕೆತ್ತಿ, ಸಿಂಹಾವಲೋಕನ ಮಾಡಿದೆ.

ಹುಡುಗಿ ಬಾಯಿ ತೆರೆದು, ಕಣ್ಣೆಡೆಯಲ್ಲೇ ನಗುನಗುತ್ತಾ ನನ್ನ ಬಕಾಸುರವಧೆಯ ಮೊದಲಂಕವನ್ನು ನೋಡುತ್ತಿದ್ದಳು. ಭಾವೀ ಅತ್ತೆ ಯಮ್ಮನವರು ದಂಗುಬಡಿದು ಬಾಗಿಲಸಂದಿಯಲ್ಲಿ ನಿಂತು ನನ್ನ ಧ್ವಂಸ ಕಾರ್ಯವನ್ನು ಈಕ್ಷಿಸುತ್ತಿದ್ದರು.

ಗೃಹಲಕ್ಷ್ಮಿ ಒಣತುಟಿಯಿಂದ ಮಂದಹಾಸ ಬೀರುತ್ತಾ ಹೊರಗೆ ಬಂದರು. "ಯಾವೂರಾಯಿತು?" ಎಂದು ಅತಿ ಮೃದುವಾಗಿ ವಿಚಾರಿ ಸಿದರು. ನನ್ನ ಭೂಗೋಳ ಶಾಸ್ತ್ರ ಜ್ಞಾನವನ್ನು ಪ್ರದರ್ಶಿಸಿದೆ. "ಕುಲ, ಗೋತ್ರ?" ಸಪ್ತ ಋಷಿಗಳಲ್ಲಿ ಒಂದು ಹೆಸರನ್ನು ಜಪಿಸಿದೆ. ಮತ್ತೆ ಒಂದಿಷ್ಟು ಸಂಕೋಚ ಸಮೇತವಾಗಿ, ಅತಿ ಪ್ರಧಾನ ಪ್ರಶ್ನೆ, ಬಳುಕುತ್ತ, ಬಾಗುತ್ತ ಹೊರಬಂತು; "ಉದ್ಯೋಗ?"

ಅಯ್ಯೋ! ಕಾರ್ಲ್ ಮಾರ್ಕ್ಸ್. ಹೋದಲ್ಲಿ ಬಿಡದು ಹೊಲೇರ ದೈವ! ನಾಟಕ ಪ್ರಪಂಚದಲ್ಲಿ ಭೀಮಸೇನನ ವೇಷ ಕಟ್ಟಿಕೊಂಡು ಸುಖವಾಗಿ ಕುಣಿ ಯುತ್ತಿರೋ ಕಾಲಕ್ಕೆ, ಈ ಯಥಾರ್ಥತೆಯ ವಿಕಟಸ್ಫೋಟನ! "ತಿಳಿಯದೇ?

ಇಲ್ಲೇ, ನಿಮ್ಮ ಯಜಮಾನರ ಆಫೀಸಿನಲ್ಲೇ ಹೆಡ್‌ಗುಮಾಸ್ತೆ ವಗೈರೆ!'' ಎಂದು ಹೇಳಿಯೇ ಬಿಟ್ಟೆ.

ತಾಯಿಗೊಂದಿಷ್ಟು ಆಶಾಭಂಗವಾಗಿರಬೇಕೆಂದು ಕಾಣುತ್ತದೆ. ಈ ಪ್ರೇಮ ಪುತ್ರಿಯ ಸಾವಿನಾಪ್ಯದಿಂದ ಬಿಡುಗಡೆಯೇ ಇಲ್ಲವೇ? ಹಾಯ! ತುಟಿಯೊಂದಿಷ್ಟು ಜೋಲು ಬಿತ್ತು. ಹುಡುಗಿಗೂ ಈ ಹೆತ್ತ ಕರುಳಿನ ಬಂಧನದಿಂದ ವಿಮೋಚನೆಯ ಸಂಭವ ದೂರವೆಂದು ಹೊಳೆದಿರಬೇಕು. ಅವಳ ಮುಖವೂ ಪೆಚ್ಚಾಯಿತು.

ನನಗೂ ಪೆಚ್ಚು ಮೋರೆಗಳ ಅರ್ಥ ತಿಳಿಯಿತು. ''ಅಂದರೆ ಒರೇ ಹಂಗಾಮಿ. ಮುಂದಕ್ಕೆ, ವಿಶಾಖಪಟ್ಣಕ್ಕೋ, ಕೊಳ್ಳೇಗಾಲಕ್ಕೋ, ವರ್ಗವಾಗಿಯೇ ಆಗುತ್ತದೆ'' ಎಂದು ಸಂತೈಸಿದೆ.

ಕೂಡಲೇ ಎರಡೂ ಮೋರೆಗಳನ್ನು ಕವಿದಿದ್ದ ಮೋಡಗಳು ಜಾರಿದುವು.

ಅಕಸ್ಮಾತ್, ಮೆಲ್ಲನೆ, ನಿಶ್ಶಬ್ಧವಾಗಿ, ಒಬ್ಬ ಸಣ್ಣ, ಬೆದರು ಮುಖದ ಪುರುಷಪ್ರಾಣಿಯ ಪ್ರವೇಶ

ಈ ನರಹುಳುವಿನ ಹಣೆಯಮೇಲೆ ''ಜೀ ಹುಜೂರ್'', ''ಅಪ್ಪಣೆ ಪ್ರಕಾರ''ಯೆಂದು ಸ್ಪಷ್ಟವಾಗಿ ಬರೆದಂತೆ ಇತ್ತು. ಬಡಕಲು ದನದ ಮುಖ, ಅಂಜುವಕಣ್ಣುಗಳು, ಸಣ್ಣ ಗಾತ್ರ. ಯಾರಪ್ಪಾ ಬಡಪಾಯಿ? ಎಂದು ಕೊಂಡೆ. ಬಡಪಾಯಿ, ನನ್ನನ್ನು ಬಾಯಿತೆರೆದು ನೋಡುತ್ತಿತ್ತು.

''ಬಂದಿರಾ? ಎಷ್ಟು ಹೊತ್ತೂಂದ್ರೇ! ಇವರು ಯಾವಾಗಲೋ ಬಂದು ಇಲ್ಲೇ ಕೂತಿದ್ದಾರೆ. ಸಮಯಸಾಂಗೆ ಬೇಡವೇ ನಿಮಗೆ?—— (ನನ್ನ ಕಡೆಗೆ ತಿರುಗಿ) --ಇವರೇ ನಮ್ಮವರು; ನಮ್ಮ ಮಗೂನ ಅಪ್ಪ.''

ಬಡಕಲು ವ್ಯಕ್ತಿಗೆ ಜ್ಞಾನೋದಯವಾದ ಹಾಗೆ ತೋರಿತು. ''ಇವರು ........ ...ನಮ್ಮ ಮಗೂನ ನೋಡೋಕೆ .. ... ..ಹೋಹೋಹೋ .... ಬಹಳ ಸಂತೋಷ, ಕೂತುಕೊಳ್ಳಿ.'' ನಾನಾಗಲೇ ಕೂತಿದ್ದೆನಷ್ಟೆ!

''ನೀವು ವರ್ಷವಿಡೀ, ಹುಡುಕಾಡಿ, ಬೆಂಡಾಗಿ, ಬಾಯಾರಿ, ಬಳಲಿ, ಜೋಲುಮೋರೆ ಹಾಕಿ ಬಂದುದಕ್ಕೆ, ಭಾಗೀರಥೀ ಹಾಗೆ ಇವರು ತಾವಾಗಿಯೇ ಬಂದುಬಿಟ್ಟರಲ್ಲಾ. ದೈವೇಚ್ಛೆ ಅಂದ್ರೆ ಅದೇ ಕಾಣ್ರಿ. ಇವರು ನಿಮಗ್ಗೊತ್ತಿಲ್ವೆ?—ನಿಮ್ಮಾಫೀಸಿನಲ್ಲಿ ಹೆಡ್‌ಗುಮಾಸ್ತೆ ಅಲ್ಲವೇ?

ಬಡಕಲು ಸಾಹೇಬರು, ಅಗಲವಾಗಿ ಕಣ್ಣರಳಿಸಿದರು. "ಹಾಂಂಂ.... ದ್ರೆ ... . .. ಹಾಗೋ! ...ಹೇಗೆ? ... ...ಇನ್ನು ಯಾರನ್ನು ನೇಮಿಸಿಲ್ಲ ತಾನೆ. ಈಗ ಇಂಟರ್‌ವ್ಯೂ ಮಾಡೋಕೆ ಹೋಗಬೇಕಷ್ಟೆ"

ಅಮ್ಮನವರು ನನ್ನ ಕಡೆಗೆ ಕಿಡಿ ಹಾರಿಸುವ ಮೊದಲೇ, ನಾನೇ ಬಾಯಿ ಹಾಕಿದೆ. "ಅದೇ ನಾನೂನೂ ಅಂದದ್ದು. ನಾನೂ ಒಬ್ಬ ಉಮೇದವಾರ. ಬೇರೇನೂ ಇಲ್ಲ. ಅವೇನೋ ವಕ್ತಿದ ಹಾಗೇ ಅಂದು ಕೊಂಡು .. ...

ಸಾಹೇಬರು ಅವಕ್ಕಾದರು. ಮತ್ತೆ; "ಛೇ! ಉಂಟೇ? ಅದು ಹೇಗಾ ದೀತು? ಎಲ್ಲರನ್ನು ಕಾಣಬೇಕು ತಾನೆ? .. ." ಎಂದು ಅತಿಸಂಕಟ ದಿಂದ ಉಭಯಸಂಕಟದಿಂದ, ಹಲುಬಿದರು.

ನಾನು, ತಿರುಗಿ, ಅತ್ತೆಯಮ್ಮನೋರ ಕಡೇಗೇ, ತೀಕ್ಷ್ಣವಾಗಿ ನೋಡಿದೆ——'ನಿಮ್ಮ ಮೋಕ್ಷ ನಮ್ಮ ಕೈಯೊಳಗಿದೆ. ಸ್ವರ್ಗವೋ, ನರಕವೋ? ನಿಮ್ಮ ಪ್ರೇಮದ ಪುತ್ಥಳಿ ಬೇಕಿದ್ದರ ನೀವೇ, ಇಟ್ಟುಕೊಳ್ಳ ಬಹುದು' ಎಂದು ಕಣ್ಣಲ್ಲೇ, ಮಾತಿಲ್ಲದೇನೇ, ಅರಿಕಯಾಯಿತು.

"ಅಯ್ಯೋ! ಅದೊಂದೇನು ಮಹಾ. ನೇಮಿಸದಿದ್ದರೇನಾಯಿತು? ನೇಮಿಸಿದ ಹಾಗೇನೇ ತಾನೆ. ನಮ್ಮವರೇ ಅಷ್ಟೆ. ನಮ್ಮವರ ಕೈ ಬಿಡೋದು ಏನು ಚಂದ? ಎಲ್ಲಾ ಸರಿ ಆಯಿತು ಅನ್ನಿ."

"ಛೇ! ಎಂದು ಸಾಹೇಬರ ಸಂಕಟ ತುಂಬಿದ ಉದ್ಗಾರ.

"ಛೇ! ಏನಿಲ್ಲ! ಬೋರಾ ಹೋಗೋ, ಆಫೀಸಿಗೆ ಹೋಗಿ, ಕಾದಿರೋ ಜನ ಜಂಗುಳಿಗೆ ಆಫೀಸ್ನಿನಿಂದ್ಲೇ ಸರ್ಕಾರೀ ಆರ್ಡರ್ ಬರುತ್ತೇಂತ್ಲೊ, ನಾಹೇಬರು ಪ್ರತ್ಯಕ್ಷ ಆಗೋದಿಲ್ಲಾಂತಲೂ ಒದರೋ"

ಸರಿ, ಬಾಗಲೋಡಿ, ಈಗ ವಿಶಾಖಪಟ್ಣಕ್ಕೆ ವರ್ಗ ಮಾಡಿಸಿ ಕೊಂಡಿ ದ್ದೇನೆ. ಚತುರ್ಭುಜನಾಗಿದ್ದೇನೆಂದು ಬೇರೆ ಹೇಳಬೇಕಿಲ್ಲವಷ್ಟೆ. ಆ ಹಿಡಿಂಬಿ ಬೇರೆ ಬಿಟ್ಟಾಳೆ! ಈ ಕಾಗದ ಮಹಾರಾಯಗಿತ್ತಿಯ ಕಣ್ಣಿಗೆ ಬಿತ್ತೋ, ಭೀಮಸೇನನ ಮೂಳೆ ಚೂರ್ಣ!

"ತರುವಾಯ............... ......................"

---

# ವೀರಬೀಡು ಬಲಭೀಮೈಯ ಅರಸು

ಒಂದಾನೊಂದು ಕಾಲದಲ್ಲಿ ವೀರಬೀಡು ಅರಸು ಮನೆತನ ಅಂದರೆ ಏನು ವೈಭವ, ಏನು ದೊಡ್ಡಸ್ತಿಕೆ, ಏನು ಪ್ರತಾಪ ಇದ್ದುವು? ಒಂದು ಕಾಲಕ್ಕಾದರೂ ಕುಂಬಳೆಸೀಮೆಗೇ ಗಂಡರೆಂದೆನ್ನಿಸಿಕೊಂಡು, ತುಂಡು ಪಾಳೆಯವೇ ಆಗಲಿ, ಅದರ ಕಿರೀಟಹೊತ್ತ ಅರಸರೆಂದು ಮೆರೆದ ವಂಶವಲ್ಲವೇ? ಹಾಗೆ ಅವರ ಅದೃಷ್ಟ ಬೆಳಗಿದ ಕಾಲದಲ್ಲಿ ವೀರಬೀಡು ಅರಸರು ದಂಡಯಾತ್ರೆಯೆತ್ತಿ ಕಾರ್ಕಳದ ಭೈರರಾಜನಿಂದಲೇ ಕಪ್ಪ ನೆಳಕೊಳ್ಳಲಿಲ್ಲವೇ? ವೀರಬೀಡಿನ "ಮೂಲೋಕದ ಮೀನ" ಎನಿಸಿಕೊಂಡ ರಣಪ್ರಚಂಡ ವಜ್ರಮಲ್ಲ ಗುಂಡರಸ ಕೊಡಿಯಾಳ*ಕ್ಕೇ ದಾಳಿಯಿಟ್ಟು ಆಲುಪರಾಜನಿಗೆ ಮೂರು ಕೆರೆಯ ನೀರು ಕುಡಿಸಲಿಲ್ಲವೆ? ದೇವರು ಮುನಿದು ಅದೃಷ್ಟ ಕೆಳಮುಖವಾದ ಸಮಯದಲ್ಲೇನೋ ಇಕ್ಕೇರಿನಾಯಕರಿಗೆ ಮಣಿದರೂ ಅವರಿಂದಲೇ "ಮಹಾ ಮಾಂಡಲಿಕರು", "ತುಳುನಾಡ ಜಗಜಟ್ಟಿ" ಗಳು ಎಂದಾದರೂ ಹೇಳಿಸಿಕೊಂಡರು.

ಆದರೆ ಈ ಸಂಸಾರದ ವೈಭವ, ಸಂಪತ್ತು ಏನು ಸ್ಥಿರ? ನೀರ ಮೇಲಿನ ಗುಳ್ಳೆ! ಲಕ್ಷಾವಧಿ ಜನರಿಂದ ವಂದಿಸಲ್ಪಟ್ಟ ದೇಹದ ಮೇಲೆ ನಾಳೆ ಕುರುಚಲು ಮುಳ್ಳು ಹುಲುಸಾಗಿ ಬೆಳೆಯುತ್ತದೆ. ಚಕ್ರವರ್ತಿಯ ನ್ಯಾಯದ ಗಾದಿ ಕಟುಕರವನ ಅಂಗಡಿಯ ಮೆಟ್ಟುಕಲ್ಲು ಆಗುತ್ತದೆ. ಆ ವಿಭವವಿಲಾಸವಾದ ವಿಜಯನಗರವೇ ಹಾಳುಹಂಪೆಯಾಗಿ ತಾಳವಿಲ್ಲದೆ ಬೇತಾಳನಂತೆ ವಿಕಟವಾಗಿ ಕುಣಿಯುತ್ತಿದೆಯಂತೆ. ವೀರಬೀಡೊಂದೇನು ಹೆಚ್ಚು? ಅರಸುಗಳ ಅರಮನೆಯ ಅಡಿಗಲ್ಲುಗಳು ಬೊಗರಿ ಸಪಿಯ ಕಾಡು, ಮುಳ್ಳುಕಂಟಿಗಳ ಪೊದೆಗಳ ಎಡೆಯಲ್ಲಿ ಬೋಳಾಗಿ ಹಣುಕುತ್ತ ಇವೆ. ಆಳೆತ್ತರದ ಪ್ರಾಕಾರವೊಂದು ಗಾಳಿ ಬೀಸದೇ ಇರುವ ದಿಕ್ಕಿನಲ್ಲಿ ವಿಕಟವಾಗಿ ಕಳೇಬರದೋಪಾದಿ ನಿಂತಿದೆ. ಅರಸರ ಬೀಡಿನ ಗುಡಿಗೂಡಾರಗಳೆಲ್ಲಾ ಜೀರ್ಣವಿನಷ್ಟವಾಗಿ ಬರಿಯ ಕಲ್ಲಿನ ಗರಡಿಮನೆ ಮತ್ತು ಬಲಭೀಮನಗುಡಿ

* ಕೊಡಿಯಾಳ— ಇಂದಿನ ಮಂಗಳೂರು.

ಮಾತ್ರ ಸ್ಮಶಾನದಲ್ಲಿ ನಿಂತಿರುವ ಭೇತಾಳನಂತೆ ಇವೆ. ಬಲಭೀಮನ ಗುಡಿಯಲ್ಲಿ ಮರದ ಬಲಭೀಮನ ಶಿರಚ್ಛೇದವಾಗಿ ರುಂಡವೆಲ್ಲಾ ಗೆದ್ದಲಿಗೌತಣವಾಗಿ, ಗದೆ ಸೌದೆಯಾಗಿ, ಭೀಮನ ಎಡಕಾಲೊಂದು ಮಾತ್ರ ಉಳಿದು, ಸದ್ಯಕ್ಕೆ ಈ ಅರಮನೆಯ ಬಾಡಿಗೇ ಸವಾಬನಾದ ಮಾಪಿಳ್ಳೆ ಮೂಸೆಬ್ಯಾರಿಯ ಆಡುಗಳನ್ನು ಕಟ್ಟುವ ಕಂಭವಾಗಿದೆ.

ಇದೆಲ್ಲಾ ಕಾಲಚಕ್ರದ ಮಹಿಮೆ, ಬಿಸಿಲು ಮಳೆಗಾಳಿಗಳ ಲಯಕಾರ್ಯ ಎಂದು ತಿಳಿದುಕೊಳ್ಳಬೇಡಿ. ಲಯಕಾರ್ಯದಲ್ಲಿ ಪ್ರಕೃತಿಯಾಗಲಿ ಪರಶಿವನೇ ಆಗಲಿ, ಮನುಷ್ಯ ಪ್ರಾಣಿಗೆ ಸರಿಸಾಟಿಯಲ್ಲ. ಈ ಅರಸುಮನೆತನ, ಅರಮನೆ, ನೆಲಸಮವಾದುದು ವೀರಬೇಡಿನ ಮೊನ್ನೆಮೊನ್ನಿನ ಕೊನೆಯ "ಅರಸು"ವಿನ "ವಿಪರೀತ ಬುದ್ಧಿ"ಯಿಂದ. ಈ ನತದೃಷ್ಟ ತನ್ನ ಭೋಗವಿಲಾಸದಲ್ಲಿ ಕರಗಿ, ತನ್ನ ವಂಶದ ಪ್ರಾಚೀನ ಮನೆಯನ್ನು, ಕುಲದೈವ ಆಂಜನೇಯನ ಬೆಳ್ಳಿಯ ಗದೆಯಿಂದ ಹಿಡಿದು ದೇವರಮನೆಯ ಸಾಲಿಗ್ರಾಮ ಸಂಪುಷ್ಟದತನಕ, ವಂಶದ ತುರಾಯಿ, ಕಿರೀಟ, ಖಡ್ಗ, ಗದ್ದಿಗೆ, ದಂತದ ಪಲ್ಲಂಕಿಗಳಿಂದ ಹಿಡಿದು ಮಾಡಿನ ತೋಪುಮರಗಳವರೆಗೆ ಎಲ್ಲವನ್ನು ತುಂಡು ತುಂಡಾಗಿ ಮಾರಿ ತಿಂದು, ಬಂಗಾರದವರಿಗೆ ಎಸೆದು ತಿನ್ನಿಸಿ, ಕೊನೆಗೆ ಫರಂಗಿ ಬಣ್ಣದ ಹೆಣ್ಣಿನ ಜೋಳಿಗೆಗೆ ಬಿದ್ದು, ಫರಂಗಿಯರ ಜಾತಿಗೆ ಸೇರಿ, ತನ್ನ ಹೆಸರನ್ನು ವರ್ಜಿಸಿ, ಅನಿಷ್ಟವಾದ ಫರಂಗಿ ಹೆಸರೊಂದನ್ನು ಇಟ್ಟುಕೊಂಡು, ಕೊನೆಗೂ ಏನೋ ಅದೇ ತರದ ಜಾಡ್ಯವೊಂದರಲ್ಲಿ ತನ್ನ ಹಾಳು ಮಲಭಾಂಡವನ್ನು ಕಳಚಿದ.

ಈಗ ನಾನು ಈ ಅಭಾಗನ, ದುರ್ಮಾರ್ಗನ ಕುತ್ಸಿತ ಚರಿತ್ರೆಯನ್ನು ಹೇಳುತ್ತಿಲ್ಲ. ಈತನ ತಂದೆ ವೀರಬೇಡು ಬಲಭೀಮೈಯ ಅರಸು ಬಹದ್ದೂರು ಪರಾಕು —ಉರುಫ್— ವೀರಬೇಡು ಕುಳ್ಳರಸು—ಉರುಫ್—ವೀರಬೇಡು ಕುಳ್ಳನ ಕತೆಯನ್ನು ಹೇಳುತ್ತೇನೆ. ಇದೊಂದೇನು ಪ್ರಾಚೀನ ಇತಿಹಾಸವಲ್ಲ. ನನ್ನ ಖಾಸಾ ಅಜ್ಜಂದಿರು ತಮ್ಮ ಚಿಕ್ಕಂದಿನಲ್ಲಿ ಇದೇ ವೀರಬೇಡು ಕುಳ್ಳರಸನನ್ನು ಕಂಡಿದ್ದರಂತೆ-ಏಳು ಸೀಮೆಗಳ ದೈವಗಳ† ಹದಿನಾಲ್ಕು ವರುಷಕೊಮ್ಮೆಯ ಕೋಲ (ಜಾತ್ರೆ) ದಲ್ಲಿ.

† ದೈವ—ದೆವ್ವ ಎಂದು ನೀವು ಕರೆಯುವಿರಿ. ತುಳುವರಿಗೆ ನಮಗೆ ದೈವಗಳು.

ಬಲಭೀಮೈಯ ಅರಸುವಿನ ತಂದೆ ಹನುಮಯ್ಯಅರಸು ಬಹದ್ದೂರು ಪರಾಕು. ಹೆಸರಿಗೇನೋ 'ಬಹದ್ದೂರು', 'ಪರಾಕು', 'ಮೂರುಸೀಮೆಯ ಮಿರಾಸ್' ಎಂದೂ ಮತ್ತೇನೇನೋ ಬಿರುದುಬಾವಲಿ. ಆದರೆ ಅಧಿಕಾರ ಅರಸೊತ್ತಿಗೆಯನ್ನೆಲ್ಲಾ ಎಂದೋ ಕುಂಪಣಿ ಸರಕಾರ ಕಸಿದುಕೊಂಡಿತ್ತಷ್ಟೆ. ಎರಡು ಹಳ್ಳಿ ಮಾತ್ರ ಜಹಗೀರಿನಂತೆ, ಕರ—ಕಂದಾಯ ಇಲ್ಲದೆ ಉಂಬಳಿಯಾಗಿ ಉಳಿದಿದ್ದುವು. ಅದೂ ಕುಲದೈವ ಆಂಜನೇಯನ ಅನುಗ್ರಹದಿಂದ. ಮತ್ತೆ ವರುಷಕ್ಕೇನೋ, ಸರಕಾರದಿಂದ ಕ್ಷುದ್ರ ಪಿಂಚಣಿ ವರ್ಷಾಸನ; ಕುಂಪಣಿ ಸರಕಾರದ ಭಿಕ್ಷಾನ್ನ; ಮೇಳ, ದೈವಗಳ ಕೋಲದಲ್ಲಿ ಅಗ್ರಸ್ಥಾನ; ಕೃಷ್ಣಮಠದ ಪರ್ಯಾಯ, ಧರ್ಮಸ್ಥಳದ ದೀಪೋತ್ಸವ ಕಾಲದಲ್ಲಿ ಮೊದಲನೆಯ ಆರತಿಯು, ಮೊದಲನೆಯ ಪ್ರಸಾದದ ಹಕ್ಕು; ಮಹಿಶೂರು ಪ್ರಭುಗಳ ಸನ್ನಿಧಿಗೆ ಹೋದಾಗ ಜೋಡು ತುಪಾಕಿಯ ಸನ್ಮಾನ. ವೀರಬೀಡು ಅರಸು ಒಂದು ಜರತಾರಿ ಶಲ್ಲೆಯಲ್ಲಿ ಒಂದು ಹಿಡಿ ಪುನುಗು ತುಂಬಿ ಮಹಿಶೂರು ಸನ್ನಿಧಾನಕ್ಕೆ ಒಪ್ಪಿಸಿದರೆ, ಒಡೆಯರು ರಾಜಮರ್ಯಾದೆಯಿಂದ ಸ್ವೀಕರಿಸಿ ಉಭಯಕೋಶಲಪರಿಗೈದು, ರೇಶಿಮೆಯ ಉತ್ತರೀಯವೊಂದರಲ್ಲಿ ಶ್ರೀಗಂಧದ ಕೊರಡೊಂದನ್ನು ಸುತ್ತಿಕೊಡುವ ಸಂಪ್ರದಾಯವೊಂದು ಮಾತ್ರ ಉಳಿದಿದ್ದುವು

ವರುಷಕ್ಕೊಮ್ಮೆ ಆಯುಧಪೂಜೆಯ ದಿನ ಗರಡಿಮನೆಯನ್ನು ಗುಡಿಸಿ, ಶುದ್ಧಮಾಡಿ, ತುಂಬಿದ್ದ ಸೌದೆಯನ್ನು ಸರಿಸಿ, ಹಳೆಯ ಕಾಲದ ಕತ್ತಿಭಲ್ಲೆಯ ಕಠಾರಿಗಳನ್ನು ಬಿಲ್ಲುಬಾಣಗಳನ್ನು ವಿಧಿವತ್ತಾಗಿ ಪೂಜಿಸಿ, "ಪ್ರಜರನ್ನು" ಅಂದರೆ ಒಕ್ಕಲುಗಳನ್ನು ಬಲವಂತದಿಂದ ವೀರಕಚ್ಚೆ ಉಡಿಸಿ ಸಾಲಾಗಿ ನಿಲ್ಲಿಸುವುದು. ಕವಾತಿನ ಆಟ ನಡೆಸುವುದು. ದಶಹರೆಯ ಕಾಲದಲ್ಲಿ ಜಾಗೀರಿಯ ಕೊನೆಯ ಗಂಧಶಾಲಿಗದ್ದೆಯನ್ನು ದಾಟಿ ಸೀಮೋಲ್ಲಂಘನದ ಶಾಸ್ತ್ರವನ್ನು ಶಂಖ ವಾದ್ಯ ಡೋಲು ಡಮರು ಕಹಳೆ ನಿಸಾನುಗಳೊಡನೆ ನಡೆಸುವುದು; ಇಷ್ಟೊಂದು ಅರಸೊತ್ತಿಗೆಯ ಆಟ ನಡೆದುಹೋಗುತ್ತಿತ್ತು. ಏನೇ ಆಗಲಿ ಅರಸು ಎಂಬ ಹೆಸರಿಗೆ ಚ್ಯುತಿ ಇರಲಿಲ್ಲ. ಜಿಲ್ಲೆಯ ಕಲೆಕ್ಟರ್ ಧೊರೆಗಳೂ ಹೊಸತಾಗಿ ಬಂದೊಡನೆ ಮಾಮೂಲಿನಂತೆ ವೀರಬೀಡಿಗೆ ಸವಾರಿ ಬೆಳಸಿ "ಮೊಕ್ಕಾಂ" ಜರುಗಿಸಿ, ಎರಡು ಕೊಬ್ಬಿದ ಹುಂಜಗಳ

“ನಜರಾಣಿ” ಯನ್ನು ಸ್ವೀಕರಿಸಿ, ವಿಕ್ಟೋರಿಯಾ ಮಹಾಮಾಯಿಯ ಪ್ರಸನ್ನತೆಯನ್ನು ಅರಸರಿಗೆ ಸೂಚಿಸುವುದು; ಇವೆಲ್ಲಾ ಘನವಾದ ಸಂಪ್ರದಾಯಗಳುಳಿದಿದ್ದುವು.

ಹನುಮಯ್ಯ ಅರಸರಿಗೆ ಬಹುಕಾಲ ಮಕ್ಕಳಾಗಲಿಲ್ಲ. ಏನೇನೋ ಹರಕೆ ಹೇಳಿಕೊಂಡರು. ಪೊಳಲಿದುರ್ಗೆ, ಕೊಲ್ಲೂರು ಮೂಕಾಂಬಿಕೆಯಿಂದ ಹಿಡಿದು ಪಂಡರಿನಾಥ, ಬದರೀನಾಥನವರೆಗೂ ಮುಡಿಪು ಕಟ್ಟಿಕೊಂಡ ನಂತರ ಪುತ್ರಾರ್ಥಿಗಳ ಉಡಿಯಲ್ಲಿ ಬ್ರಹ್ಮ ವರವನ್ನೆಸೆದ. ಅರಸಿ ಬಸುರಾದಳು ಅರಮನೆಯಲ್ಲಿ ವಿಜೃಂಭಣೆ ಉತ್ಸವಗಳಿದ್ದುವು. ನಾಲ್ಕು ನೆರೆಯೂರುಗಳ ಮುದುಕಿಯರೆಲ್ಲಾ ಸೂಲಗಿತ್ತಿಯರೆಂದು ಹೇಳಿಕೊಂಡು ಹಾಯಾಗಿ ಅರಮನೆಯಲ್ಲಿ ಬೀಡುಬಿಟ್ಟು ಪುಷ್ಕಳವಾಗಿ ತಿಂದು ತೇಗಿದರು. ಯಥಾಪ್ರಕಾರವಾಗಿ ಶಾಂತಿಪೂಜೆಗಳೂ ನಡೆದು ಹಾರವರೆಲ್ಲಾ ಹೊಟ್ಟೆ ಬಿರಿಸಿಕೊಂಡು ದಕ್ಷಿಣೇ ಸುಲಿದರು. ಕೊನೆಗೆ ಈ ವಿಜೃಂಭಣೆಗೆ ಕಾರಣಭೂತನಾದ ಮಹಾತ್ಮನೇ ಅವತರಿಸಿದ –“ಕೇಂ”ಕಿರಿಚಾಟದೊಡನೆ ಅನ್ನಿ. ಅಪೂರ್ವವಾದ ಸಂಭ್ರಮುವಾಯಿತು. ಜ್ಯೋತಿಷ್ಕರಿಗೆ, ಗುಣಕರಿಗೆ ಜಾತಕ ರಚಯಿತರಿಗೆ ಹಬ್ಬವಾಯಿತು. ಅರಸು ಮಗನಿಗೆ ಶುಭ ಮುಹೂರ್ತದಲ್ಲಿ ಸಂಭ್ರಮದೊಡನೆ, ವೇದಘೋಷಸಹಿತವಾಗಿ ಬಲಭೀಮೈಯ ಬಹದ್ದೂರು ಪರಾಕು ಎಂದು ಶುಭನಾಮಕರಣವಾಯಿತು.

ಮಗು ಆರೋಗ್ಯವಾಗಿ ಸುಖವಾಗಿ ಬೆಳೆಯುತ್ತಿತ್ತು. ದುಂಡು ದುಂಡಾಗಿ ಮುದ್ದುಮುದ್ದಾಗಿ ಆರೋಗ್ಯಕಳೆ ತುಂಬಿ ಇತ್ತು. ಜ್ಯೋತಿಷ್ಕರು, ಪಂಚಾಂಗಕರ್ತರು, ಅರಸನ ನೆಂಟರಿಷ್ಟರು “ರಾಜಲಕ್ಷಣ ಎಂಬೋದು ಮನೆಗೆ ತೋರಣಕಟ್ಟಿದಂತೆ ಸ್ಪಷ್ಟವಾಗಿ ಮೂಡಿದೆ. ದೊರೆಮಗ ತೇಜಸ್ವಿಯಾಗುತ್ತಾನೆ. ಊರಿಗೆ ಗಂಡನಾಗಿ ಕೀರ್ತಿಶಾಲಿಯಾಗುತ್ತಾನೆ” ಎಂದರು.

ಮಗುವಿಗೆ ವರುಷ ಎರಡಾಯಿತು. ಮೂರಾಯಿತು. ಐದಾಯಿತು. ಪ್ರವರ್ಧಮಾನ ಚಂದ್ರನಂತೆ ಕಂದ ಬೆಳೆಯಿತು. ಆರಾಯಿತು, ಏಳಾಯಿತು. ಅಂಗಾಂಗ ತುಂಬಿ ಕೂಸು ಹುಡುಗನಾಗುತ್ತಾ ಬರುತ್ತಿತ್ತು. ಆದರೆ ಗಾತ್ರ–ಎತ್ತರ–ಏಕೋ ಬೆಳೆಯಲಿಲ್ಲ. ಎಂಟು–ಹತ್ತು–ಹದಿನೆರಡಾಯಿತು. ಹುಡುಗನ ಗಾತ ಹೆಚ ಲಿಲ. ಹನೆ ರಡು ವರುಷವಾದರೂ ಗಾತ ನೋಡಿ “ಐದು

ವರುಷ ಮಿಗಲಿಕ್ಕಿಲ್ಲ'' ಎಂದು ಎಲ್ಲರೂ ಹೇಳಬೇಕಾಗಿತ್ತು. ವೈದ್ಯರನ್ನು ಪಂಡಿತರನ್ನು ಕರೆಸಿ ತೋರಿಸಿದರೆ, ಕಷಾಯ, ಚೂರ್ಣ, ಘೃತ, ಲೇಹ್ಯ, ವಿಭೂತಿ, ತಾಯಿತ, ಮಂತ್ರ, ಮಾಟ ಎಂದು ದಕ್ಷಿಣೆ ಕಸಿದುಕೊಂಡರೇ ವಿನಹಾ ಹುಡುಗ ಒಂದಂಗುಲದಷ್ಟು ಬೆಳೆಯಲಿಲ್ಲ. ಅರಸು ಅರಸಿ "ಅಯ್ಯೋ ದೇವರೇ, ಕೊಡದೇ ಕೊಡದೇ, ಹಂಗಿಸಿ ಹಂಗಿಸಿ ಕೊನೆಗೆ ಕೊಟ್ಟು,ಕೊಟ್ಟ ವರವನ್ನೇ ಕುಂಟಾಗಿ ಮಾಡಿದೆಯಾ? ನಿನ್ನ ಕೊಡುಗೈ ಡೊಂಕಾಯಿತೇ?'' ಎಂದು ಅಳುತ್ತಿರುವಷ್ಟರಲ್ಲೇ ಹುಡುಗನಿಗೆ ಹದಿನಾರಾಯಿತು. ಗಾತ್ರ ಮಾತ್ರ ಐದು ವರುಷದ ಕೂಸಿನದೇ ಉಳಿಯಿತು.

ಹಾಗೆಂದು, ಕುಳ್ಳರಿಗೆ, ಅಪಾಂಗರಿಗೆ ಇರುವ ವಿಕೃತ ಶರೀರದಂತೆ, ದೇಹವೇನೂ ಸೊಟ್ಟನಾಗಲೀ, ಮುಖವೇನಾದರೂ ಸುಕ್ಕು ಗಟ್ಟಿಯಾಗಲೀ ಅಂಗಾಂಗಗಳು ಪ್ರಮಾಣ ಮೀರಿ ಬೆಳೆದಾಗಲೀ ಇರಲಿಲ್ಲ. ಮೂಗು, ಕಣ್ಣು, ಕಿವಿ, ಕೈ ಕಾಲು ಗಾತ್ರಕ್ಕೆ ತಕ್ಕಂತೆ ಪರಿಷ್ಕಾರವಾಗಿ, ಚೊಕ್ಕವಾಗಿ ವರಶಿಲ್ಪಿ ಕಡೆದ ಗೊಂಬೆಯಂತೆ ಪ್ರಮಾಣಬದ್ಧವಾಗಿ ತೂಗಿ ಇಟ್ಟಂತೆ ಮಾಟವಾಗಿದ್ದುವು. ವಾಮನಮೂರ್ತಿಯ ತುಟಿಯ ಮೇಲೆ ಚಿಗುರು ಮೀಸೆಯೂ ಒಪ್ಪುತ್ತಿತ್ತು.

ಪರಮಾತ್ಮನಿಗೂ ಒಮ್ಮೊಂದೊಮ್ಮೆಗೇ ಎಲ್ಲಿಂದ ಕುಚೇಷ್ಟೆ ಹೊಳೆಯುತ್ತೋ? ಇಲ್ಲವಾದರೆ ತನ್ನ ಭಕ್ತರನ್ನೇಕೆ ಹೀಗೆ ಪೀಡಿಸಬೇಕು? ಆದರೆ ದೈವವನ್ನು ದೂರಿ ಏನುಫಲ? ಮನುಷ್ಯನಿಗೆ ದಿನಾರ್ಧ ಕಣ್ಣು ಮುಚ್ಚಿಯೇ ಇರುತ್ತೆ; ಇನ್ನು ದಿನಾರ್ಧ ಒಳಗಣ್ಣು ಮುಚ್ಚಿರುತ್ತೆ. ಈ ಆಯುಷ್ಕಾಲದಲ್ಲಿ ತಿಳಿದೋ ತಿಳಿಯದೆಯೋ, ಕಣ್ಣು ತೆರೆದೋ ಕಣ್ಣು ಮುಚ್ಚಿಯೋ ಎಷ್ಟು ಅಪರಾಧ ಘಟಿಸಬಹುದೋ ಯಾರಿಗೆ ಗೊತ್ತು? ಎಂದೂ ಮುಚ್ಚದ, ಅನಿಮಿಷವಾದ ಆ ನೂರು ಕಣ್ಣುಗಳು ಎವೆಯಿಕ್ಕದೆ ನಮ್ಮನ್ನೇ ದಿಟ್ಟಿಸುತ್ತಾ ಇವೆಯೆಂದು ನಮ್ಮ ಕ್ಷುದ್ರ ಜೀವನಗಳ ಕ್ಷುದ್ರ ಕೋಲಾಹಲಗಳಲ್ಲಿ ನಮಗೆ ವಿಸ್ಮೃತಿಯಾಗಿ ಹೋಗುತ್ತದೆ. ಹನುಮಯ್ಯ ಅರಸರ ಅರಸಿ ತುಸು ಹೊಸ ಮರ್ಜಿಯಾಕೆ. ಪಟ್ಟಣದ ಗಾಳಿ ಸೋಂಕಿದವಳು; ಮೈಸೂರ ಕಡೆ ಜಾಗೀರುದಾರರ ಮಗಳು; ನಾಜೋಕಿನಾಕೆ ಅವಳು ಅರಮನೆಯಲ್ಲಿನ ದೇವರ ಮನೆಯ ಕುಲದೈವತ ಆಂಜನೇಯನ

ಒರಟಾದ, ಗುಂಡಗಿನ ದೊಡ್ಡ ಕರಿಯಕಲ್ಲಿನ ವಿಗ್ರಹವನ್ನು ಬದಿಗೆ ಸರಿಯಿಸಿ, ಬದಲಿಗೆ ಚಿನ್ನದ, ಪುಟ್ಟನಾದ ಮಾಟವಾದ ಮುದ್ದು ಬಾಲಾಂಜನೇಯ ಮೂರ್ತಿಯನ್ನು ಪ್ರತಿಷ್ಠಿಸುವಂತೆ ಮಾಡಿಸಲಿಲ್ಲವೇ? ಇದು ವಜ್ರಕಾಯ ಮುಖ್ಯಪ್ರಾಣನಿಗೆ ಪ್ರಿಯವಾಗಲಿಲ್ಲವೋ ಏನೋ ಯಾರು ಬಲ್ಲರು? ಅಂತೂ ಇಂತು ವೀರಬೀಡಿನ ದೊರೆಮಗ "ಚಿಕ್ಕರಸು" ಜೋಟುದ್ದದವನೆಂದು ನಿಶ್ಚಯವಾಯಿತು.

ಜೋಟುದ್ದದವನೆಂದು ಕತ್ತು ಹಿಚುಕಿ ಎಸೆಯಲಾಗುತ್ತದೆಯೇ? ಕಣ್ಣುಕಟ್ಟಿ ಕಾಡಿನಲ್ಲಿ ಬಿಡುವುದೇ? ಮಾಡಬೇಕಾದ ಕರ್ಮಾದಿಗಳನ್ನು ವಿಧಿಪ್ರಕಾರ ನೆರವೇರಿಸಲೇಬೇಕು ತಾನೆ? ಹನುಮಯ್ಯ ಅರಸು ಚಿಕ್ಕರಸುವಿಗೆ ಯಾವ ನ್ಯೂನತೆಯನ್ನು ಉಂಟುಮಾಡದೆ, ಬಲಭೀಮ್ನೆಯನ ವಾಮನಾಕೃತಿಯ ಗೋಚರವೇ ಇಲ್ಲದವರಂತೆ ಕ್ರಮವಾಗಿ ಮುಂಜಿ, ಗದ್ದುಗೆಪೂಜೆ, ಅಕ್ಷರಾಭ್ಯಾಸ, ಗರಡಿವಿದ್ಯೆ ಇತ್ಯಾದಿಗಳನ್ನು ಮಾಡಿಸಿದರು. ಗರಡಿಮನೆ ಮಲ್ಲಗಟ್ಟಿ—ಪರಂಪರಾಗತವಾಗಿ ಬೀಡಿನರಸರಿಗೆ ಗರಡಿಯಾಟ ಕಲಿಸಿದ ವಂಶದವನು—ಆಯುಧ ಪೂಜೆಯ ದಿನ ಶಾಸ್ತ್ರೋಕ್ತವಾಗಿ ಕುಸ್ತಿ, ಸಾಮು, ಕಾಳಿಗ, ಪಟ್ಟುಗಳನ್ನು ಕಲಿಸತೊಡಗಿದ. ಕಮ್ಮಾರನಿಂದ ಚಿಕ್ಕರಸರಿಗೆಂದೇ, ನಾಲ್ಕಂಗುಲದ ಪುಟ್ಟ "ಚಂದ್ರಾಯುಧ" ತಲವಾರೂ ಸಿದ್ಧವಾಗಿ, ಪಟ್ಟಾ ತಿರುಗಿಸಲು, ತಲವಾರು ಬೀಸಲು ಕಲಿಯುವ ಪ್ರಹಸನ ನಡೆಯಿತು. ಗರಡಿ ಮನೆ ಗಟ್ಟಿ, ಹೊಟ್ಟೆಯಲ್ಲಿ ತುಂಬಿದ ನಗುವನ್ನು ಒತ್ತಿ ಹಿಡಿದು, ಈ ನರ ಪಿಪೀಲಿಕೆಗೆ ಪಟ್ಟಾ, ಗತ್ತು, ವರಸೆ ಕಲಿಸಿದ. ಅರಬೀ ಟಾಕಣಗಳಲ್ಲಿ ಅತೀವ ಪುಟ್ಟದೊಂದರ ಬೆನ್ನಮೇಲೇರಿಸಿ, ಅರಮನೆಯ ಒಳ ಅಂಗಳದ ಸುತ್ತು ಕುಣಿಯುವ ಶಾಸ್ತ್ರವೂ ಆಯಿತು. ಬಿಲ್ಲು ವಿದ್ಯೆಯನ್ನು ಅಲಂಕಾರಕ್ಕೆ ತಕ್ಕಂತೆ ಬೋಧಿಸಿಯಾಯಿತು.

ತದನಂತರ ವಿದ್ಯಾದಶಮಿಯ ದಿನ ಶ್ರೀ ಗಣೇಶಾಯನಮವೂ ನಡೆದು ಹಯಗ್ರೀವ ಐಗಳು ಅರಸುಮಗನ ತೋರ್ಬೆರಳಿಂದ ಕುಂಕುಮ ಗಂಧ ಬೆರಸಿದ ಹೊಯಿಗೆಯ ಮೇಲೆ ಅಕ್ಷರ ಬರೆಯಿಸಿದರು. ಆಪಶ್ಚಾತ್ ಸಂಸ್ಕೃತದಲ್ಲಿ ಅಮರದಿಂದ ಮೊದಲುಮಾಡಿ, ನ್ಯಾಯ, ತರ್ಕ, ದರ್ಶನಾದಿಗಳನ್ನು, ಕಾವ್ಯಗಳನ್ನು ಓದಿಸುವಂತೆ ಕಟ್ಟುಮಾಡಿದರು. ಈ ಇಲಿ ಗಾತ್ರದ ಪ್ರಾಣಿ,

ಪೀತಾಂಬರವನ್ನು ಹೊದ್ದು, ವಜ್ರಹಾರವನ್ನು ಧರಿಸಿಕೊಂಡು, ತೋಳಲ್ಲಿ ಚಿನ್ನದ ತಾಯಿತತೊಟ್ಟು, ಮಣ ಮಣ ಭಾರದ ಉದ್ಗ್ರಂಥಗಳನ್ನು ಹೊರಲಾರದೆ ಹೊತ್ತು, ಮಾರುದ್ದದ ಸಂಸ್ಕೃತಶಬ್ದ ಕಂಟಕಗಳನ್ನು, ಶ್ಲೋಕ ಕಾಂತಾರಗಳನ್ನು ದಾಟುತ್ತ ಹೆಣಗುವುದು ನೋಡಲು ಬಲು ಚೋದ್ಯವಾಗಿರಬೇಕು.

ಸರಿ; ಇಪ್ಪತ್ತೊಂದನೆಯ ವಯಸ್ಸಿನಲ್ಲಿ ವಿಧಿಯುಕ್ತವಾಗಿ ಸಕಲ ವಿಜೃಂಭಣೆಯೊಡನೆ ಯುವರಾಜ್ಯಾಭಿಷೇಕವಾಯಿತು. ಅರಸಿಯೇನೋ ನಾಚಿಕೆಪಟ್ಟುಕೊಂಡು, "ನಮ್ಮ ಮೂಗನ್ನು ಲೋಕದೆದುರು ನಾವೇ ಕೊಯಿದುಕೊಳ್ಳಬೇಕೆ? ಏನೋ ಚುಟುಕಿನಲ್ಲೇ ದೇವರಮನೆಯೊಳಗೇ, ಗದ್ದಿಗೆಪೂಜೆಯ ಶಾಸ್ತ್ರ ಮುಗಿಸೋಣ" ಅಂದರೂ, ಕರ್ಮಪರಾಯಣರಾದ ಹನುಮಯ್ಯ ಅರಸರು: "ಕುಳ್ಳನಾಗಲಿ ಕುರುಡನಾಗಲಿ, ಹೆಳವನಾಗಲಿ ಹೆಡ್ಡನಾಗಲಿ, ಅರಸು ಮಗನೆ ಸರಿ. ನಾಳೆ ಗದ್ದುಗೆಯನ್ನೇರುವಾತನನ್ನು ಘಂಟಾಘೋಷವಾಗಿ ಸಮಸ್ತ ಪ್ರಜರೆದುರು ಅಭಿಷೇಕಮಾಡಲೇಬೇಕು" ಎಂದು ನಿರ್ಧರಿಸಿ ಸಮಾರೋಹವನ್ನೆಲ್ಲಾ ಒಂದೂ ಬಿಡದೆ ಜರುಗಿಸಿದರು.

ಇಪ್ಪತ್ತೈದು ವರುಷ ವಯಸ್ಸಾದಾಗ ವಿವಾಹದ ವಿಚಾರವಾಯಿತು. ಇದೊಂದು ದೊಡ್ಡ ಸಮಸ್ಯೆಯೇ ಆಗದೇ ಇದ್ದೀತೇ? ಅವತಾರ ಮೂರ್ತಿಯಾದ ವಾಮನದೇವರೇ ಉಪಾಯಗಾಣದೆ ಬ್ರಹ್ಮಚಾರಿಯಾಗಿಯೇ ಆಯುಷ್ಯ ಕಳೆಯಬೇಕಾಯಿತಂತೆ. ಈ ವಾಮನನಿಗೆ ಅನುರೂಪಿಯಾದ ಕನ್ಯಾವಿಚಿತ್ರವನ್ನೆಲ್ಲಿಂದ ತರುವುದು? ಹನುಮ್ಮೈಯ ಅರಸು ಬಲು ಹುಡ್ಕಿ ಕಾಡಿ ಬೇಸತ್ತರು. ತುಳುನಾಡಿನಲ್ಲಾಗಲೀ, ಮಹಿಷೂರು ಸೀಮೆಯಲ್ಲಾಗಲೀ ಕೊಡವರ ಸೀಮೆಯಲ್ಲಾಗಲೀ ನಮುವಂಶದ ಅಂದರೆ ಅರಸು ಸಂತತಿಯ ಕನ್ಯಾಕುಬ್ಜೆ ಯಾರೂ ಕಣ್ಣಿಗೆ ಬೀಳಲಿಲ್ಲ. ಹಾಗೆ ಯಾವುದೋ ಯಃಕಶ್ಚಿತ ಕುಲದ ಅಳಿಲನ್ನು ತಂದು ಗದ್ದುಗೆಯ ಎಡಪಕ್ಕದಲ್ಲಿ ಕುಳ್ಳಿರಿಸುವುದು ಚಂದವೇ? ತಲತಲಾಂತರದಿಂದ ಪೂಜಿಸಿ ಅರ್ಚಿಸಿದ ಗದ್ದುಗೆಯಲ್ಲವೇ? ಮೂರು ಹಿಡಿಯಷ್ಟಾದರೇನು ಅರಸುಮಗ ಸಿಂಹದ ಹೊಟ್ಟೆಯಲ್ಲೇ ಹುಟ್ಟಿದುದಲ್ಲವೇ?

ಕೊನೆಗೂ ತಂಜಾವೂರು ಕಡೆಯಿಂದ ಜಾಗೀರುದಾರರ ಮನೆತನ

ವೊಬ್ಬಾಕೆ ವಧು ಅವತರಿಸಿದಳು. ಸಣ್ಣಾಕ ಸರಿಯೆ. ಮುದ್ದಾದ ಮಾಟವಾದ ಅಂಗಾಂಗ; ಲಕ್ಷಣವಾದ ಮೊರೆ ಬಲಭೀಮೈಯ ಬಹದ್ದೂರು ಪರಾಕಿಗಿಂತೇನೋ ಎರಡಂಗುಲದಷ್ಟು ಎತ್ತರವೂ, ನಾಲ್ಕಂಗುಲ ಅಗುಲವೂ ಹೌದು. ಆದರೇನು, ಅಳೆದು, ತೂಗಿ, ತಕ್ಕಡಿಯ ಮೇಲಿಟ್ಟುಕೊಂಡು ಬ್ರಹ್ಮ ವಧೂವರರನ್ನು ಸೃಷ್ಟಿಸುತ್ತಾನೆಯೋ?

ಹನುಮೈಯ ಅರಸರು ಈ ವಿವಾಹವನ್ನು ಅತಿ ಸಂಭ್ರಮದಿಂದ, ಜನ ಜಂಗುಳಿಯ ನಗು, ಹಲ್ಲುಕಿರಿತ, ಕಣ್ಣುಮಿಟುಕಾಟಗಳನ್ನು ಕಡೆಗಣಿಸಿ, ಸಂಪ್ರದಾಯಕ್ಕೆ ಎಳ್ಳಷ್ಟೂ ಕುಂದು ತಾರದೆ ನೆರವೇರಿಸಿದರು. "ನಮ್ಮ ಪೂರ್ವಜ ವಜ್ರಮಲ್ಲ ಗುಂಡರಸನಿಗೆ ಅಳದುಂಗಡಿಯ ಮಲ್ಲಮ್ಮಾಜಿಯೊಡನೆ ಆದ ಕಲ್ಯಾಣವಷ್ಟೇ ವೈಭವದಲ್ಲಿ ನಡೆಸುತ್ತೇನೆ. ದೇವರೇನೋ ನನ್ನನ್ನು ಮೂದಲಿಸಿ ನಾಚಿಕೆಗೇಡು ಮಾಡಬೇಕೆಂದು ಛಲತೊಟ್ಟಿದ್ದಾನೆ. ಆದರೆ ವೀರಬೀಡು ಅರಸರು ದೇವರ ಛಲಕ್ಕೂ ಸೊಪ್ಪು ಹಾಕಿದವರಲ್ಲ. ಅವನ ಕಣ್ಣೆದುರೇ ವೀರಬೀಡಿನ ದರ್ಬಾರು, ನನ್ನ ಜೀವವಿರುವಷ್ಟು ಕಾಲ ನಡೆಸುತ್ತೇನೆ." ಎಂದು ಹೇಳಿ ಪೂರ್ವಾಗತ ಸಂಪ್ರದಾಯ ಪ್ರಕಾರ, ಶೃಂಗೇರಿಯಿಂದ ಕುಲಾಚಾರ್ಯರನ್ನೂ, ಮಲೆಯಾಳದಿಂದ ಹೋಮ ಯಜ್ಞ ನಿಪುಣರಾದ ತಾಂತ್ರಿಕರನ್ನೂ, ಹರಿದ್ವಾರದಿಂದ ಗಂಗೋದಕವನ್ನೂ, ತಂಜಾವೂರಿನಿಂದ ನಾಗಸ್ವರ, ವೀಣೆಗಳನ್ನು ನುಡಿಸುವ ಸಂಗೀತಗಾರರನ್ನೂ, ಪಾಲಘಾಟಿನಿಂದ ಮೃದಂಗ ಪಂಡಿತರನ್ನೂ, ಕುಂಭಕೋಣದಿಂದ ಭಾಗವತರನ್ನೂ, ಹಾಸನ–ಮಧುರೆಗಳಿಂದ ನಾಚು–ರಂಗಿನ ಸಾನಿಯರನ್ನೂ (ನರ್ತಕಿಯರು,) ಉಡುಪಿಯಿಂದ ಬ್ರಾಹ್ಮಣರನ್ನೂ, ನಳನಮಾನರಾದ ಅಡುಗೆಯವರನ್ನೂ ಕರೆಸಿ ನ ಪೂರ್ವೋ ನ ಭವಿಷ್ಯತಿ ಎಂಬಂತೆ ಅಟ್ಟಹಾಸದಿಂದ ಮದುವೆ ಜರುಗಿಸಿದನು. ಊರೂರುಗಳ ಅರಸು, ಪಾಳೆಯಗಾರ, ಇನಾಮುದಾರ, ಗುರಿಕಾರರನ್ನು, ಮಠಾಧಿಪರನ್ನು ಆಮಂತ್ರಿಸಿ ಮರ್ಯಾದಿಸಿದರು. ಮೈಸೂರು ಅರಸುಗಳ ಕಡೆಯಿಂದ ಕುದುರೆ ಪಡೆಯ ಸುಬೇದಾರರು ಹನ್ನೆರಡು ಅಶ್ವಾರೋಹಿಗಳನ್ನೊಡಗೂಡಿ ಸುವರ್ಣ ಕಲಶ ಗಂಧವಿಗ್ರಹಾದಿ ಉಪಹಾರ ವಸ್ತುಗಳನ್ನು ತಂದು ಪ್ರಭುಗಳ ಪರವಾಗಿ ಸ್ವಸ್ತಿ ವಚನಗಳನ್ನು ಹೇಳಿದರು.

+ + + + + +

ತನ್ನ ಇಹ ಜೀವನದ ಕರ್ತವ್ಯಗಳನ್ನು ಮಂಗಲಗೊಳಿಸಿದ ತರುವಾಯ ಹನುಮಯ್ಯ ಅರಸರು, ತೃಪ್ತಿಯಿಂದ, ಸಂತೋಷದಿಂದ, ಕೆಲಕಾಲನಂತರ ಕಣ್ಣುಮುಚ್ಚಿದರು. ಅರಸಿಯೂ ಹೆಚ್ಚು ಕಾಲ ಗಂಡನನ್ನುಳಿದು ಇರಲಿಲ್ಲ.

ಹನುಮೈಯ ಅರಸರ ಕಾಲಾನಂತರ, ಬಲಭೀಮೈಯ ಅರಸು ಬಹದ್ದೂರು ಪರಾಕಿನ ಮೂರು ಹಿಡಿಗಾತ್ರ ಸಸೀನು, ತುಪಾಕಿ, ವೇದಘೋಷಗಳ ಸಡಗರದೊಡನೆ ಗದ್ದಿಗೇಯೇರಿತು. ಅರಸು ಪರಿವಾರದ ಚಾಕರರು, ಕರಣೀಕರು, ದಿವಾಣರು, ಪಾರುಪತ್ತೇಗಾರರು, ಭಂಡಾರಿಗಳು, ಶೇನವರು, ಈ ಪಿಳ್ಳೆಯ ಕೈಗೆ ಬಂದ ''ಸಂಸ್ಥಾನ'' ತಮ್ಮದೇ ಬಾಯಿನ ಸವಿಯಾದ ತುತ್ತೆಂದು ಭಾವಿಸಿ ಹಿಗ್ಗಿದರು. ಈ ಹುಳುಗಾತ್ರದ "ಅರಸು ಬಹದೂರ"ನ್ನು ಯಾರಾದರೂ ಲಕ್ಷಿಸುವುದುಂಟೇ?

ಆದರೆ, ಅವರೆಣಿಸಿದ ಹಾಗೆ ಆಗಲಿಲ್ಲ. ಈ ಕ್ಷುದ್ರ ಗಾತ್ರದ ಪ್ರಾಣಿ ತಾನು ಬಲಭೀಮೈಯ ಅರಸು ಬಹದೂರ ಪರಾಕು ಎಂದು ಮರೆಯಲಿಲ್ಲ. ತನ್ನ ನೆಲ್ಲಿಕಾಯಿ ಗಾತ್ರದಲ್ಲೂ ವಜ್ರಮಲ್ಲ ಗುಂಡರಸನ ಅಬ್ಬರ, ದೊಡ್ಡಸ್ತಿಕೆ, ಘನತೆಗಳನ್ನು ತುಂಬಿಕೊಂಡು, ಹಿರಿಯರ "ಕಾರುಬಾರಿಗೆ", ವರ್ಚಸ್ಸಿಗೆ ಎಳ್ಳಷ್ಟೂ ಕುಂದುಬಾರದಂತೆ ನಡೆಯುವ ಹವಣಿಕೆಯಲ್ಲಿದ್ದಂತೆ ತೋರಿತು.

ಹಿಂದಕ್ಕೆ ವೀರಬೀಡ ಅರಸರು ಮೃಗಯಾವಿಹಾರ ಅಂದರೆ ಬೇಟೆಯನ್ನು ಕ್ಷಾತ್ರಧರ್ಮವೋ ಎಂಬಂತೆ ನಡೆಸುತ್ತಿದ್ದರು. ಬಲಭೀಮೈಯ ಅರಸೂ ಬಿಡಲಿಲ್ಲ. ಯಾವ ಪುಟ್ಟ ಟಾಕಣವನ್ನೇರುವುದೂ ಕೈಲಾಗದೇ ಹೋದುದರಿಂದ, ಅರಮನೆಯಲ್ಲಿ ಸಾಕಿದ್ದ ದೊಡ್ಡ ದೊಡ್ಡ ಬೇಟೆ ನಾಯಿಗಳಿಗೆ ದಾರ, ಪಟ್ಟಿ ಬಿಗಿದು ಸವಾರಿಮಾಡಲು ಕಲಿತುಕೊಂಡರು. ಇವುಗಳನ್ನೇರಿ ಪುಟ್ಟ ಪುಟ್ಟ ವಿಲಾಯತೀ ನಾಯಿಗಳ ಗುಂಪಿನೊಡನೆ, ಶ್ವಾನಾರೂಢನಾಗಿ, ಕಾಡಿನಲ್ಲಿ ಮೊಲಗಳನ್ನು ಮುಂಗುಲಿಗಳನ್ನೂ, ಹೊಲಗಳಲ್ಲಿ ಹೆಗ್ಗಣಗಳನ್ನೂ " ಶಿಕಾರಿ " ಮೊದಲುಮಾಡಿದರು. ಈ ವಿಚಿತ್ರ ಮೃಗಯಾವಿಹಾರದಲ್ಲಿ ಅತ್ಯಂತ ಉತ್ಸಾಹ, ಆನಂದ ಅವರಿಗೆ ದೊರೆಯುತ್ತಿತ್ತು. ಗಟ್ಟಿಯಾಗಿ ಆರ್ಭಟಿಸಿ, ಕೊಂಬು ಊದಿ, ಪುಟ್ಟ ಪುಟ್ಟ ನಾಯಿಗಳನ್ನು ಹುರಿದುಂಬಿಸಿ, ನಾಯಿಯ ದಾರಪಟ್ಟಿಗಳನ್ನು ಕಡಿವಾಣದಂತೆ ಎಳೆದು, ಕಾಲಿಂದ ಚುಚ್ಚಿ, ಕೈಯಲ್ಲಿದ್ದ ಪುಟ್ಟ ತಲವಾರು "ಚಂದ್ರಾಯುಧ" ವನ್ನು ಝಳಪಿಸಿ, ಮೊಲ

ಗಳನ್ನು ಹೆಗ್ಗಣ ಮುಂಗಿಲಿಗಳನ್ನು ಸಂಹರಿಸಿದಾಗ, ವೀರಾವೇಶದಿಂದ ಕೆಂಪಡರಿ, ಈ ವಾಮನಮೂರ್ತಿ ಪುಟ್ಟ ತಮಾಷೆಯಾದ ಭೈರವಮೂರ್ತಿಯಾಗಿತ್ತು.

ಆದರೆ ಈ ಸುಖವನ್ನು ಹೆಚ್ಚುಕಾಲ ಅನುದಿನಲಾಗಲಿಲ್ಲ. ಈ ವಿಚಿತ್ರ "ಮೃಗಯಾವಿಹಾರ'' (ಶಿಕಾರಿ) ದ ಸುದ್ದಿ ಹರಡಿ, ಜನರೆಲ್ಲಾ ಈ ಮೋಜಿನ ಬೇಟೆಯನ್ನು ನೋಡಲು ಹಲ್ಲುಕಿರಿಯುತ್ತ ಸಂತೆಗಟ್ಟ ನೆರೆಯಲಾರಂಭಿಸಿದರು. ಬಲಭೀಮೈಯ ಅರಸು ಬಹದ್ದೂರು ಹಲ್ಲುಕಡಿದು, ಉಗುಳುನುಂಗಿ, ತನ್ನ "ಕದುರೆ" (ಶ್ವಾನಾಶ್ವ) ಗಳ ಪಟ್ಟಿ ದಾರಬಿಚ್ಚಿ ಎಸೆದು, ಚಂದ್ರಾಯುಧವನ್ನು ಒರೆಯಲ್ಲಿಟ್ಟು, ತನ್ನ ಬೇಟೆಯ ವೀರಕಚ್ಚೆ ಬಿಚ್ಚಿ ಮನೆಯೊಳಗೇ ಇರಬೇಕಾಯಿತು. ಈ ಪ್ರಪಂಚಕ್ಕೆ ತನ್ನಂತೆಯೇ ಇರದ ಪ್ರಾಣಿಗಳ ಮೇಲೆ ತಾತ್ಸಾರವೋ ತಿರಸ್ಕಾರವೋ ಇರುವುದು ನ್ಯಾಯವೇ ಸರಿ. ಆದರೆ ಈ ತರದ ಕ್ರೂರ ಕುತೂಹಲವಾದರೂ ಏಕೋ?

ಹಾಗೆಯೇ ನಾಲ್ಕು ಜನ ಕೂಡಿದಲ್ಲಿ, ಔತಣ, ಸಭೆ, ಸಮಾರಾಧನೆಗಳಲ್ಲಿ ವೀರಬಿಡು ಅರಸರು ಬಂದು ಇರುವ ಕ್ರಮವನ್ನು ನಿಲ್ಲಿಸಬೇಕಾಯಿತು. ಮದುವೆಗಳಿಗೆ ಬಂದ ಅತಿಥಿ ಅಭ್ಯಾಗತರು, ಎಲ್ಲರೂ ಧಾರೇ ಮಂಟಪ, ವಧುವಿನ ಸಿಂಗಾರ, ವಜ್ರದ ಬೆಂಡೋಲೆ, ಬಂಗಾರದ ಡಾಬುಗಳನ್ನು ದಿಟ್ಟಿಸುವುದರ ಬದಲು ನಮ್ಮ ಅರಸ ಬಹದ್ದೂರರ ಪುಟ್ಟಹಿಡಿಯಷ್ಟರ ಮೋರೆಯ ಮೇಲೆ ದಪ್ಪನಾಗಿ ಕಾಡಿನಂತೆ ಹಬ್ಬಿಕೊಂಡ ವೀರಬೀಡಿನ ವೀರ ಮೀಶೆಯ ಮೋಜನ್ನೇ ನೋಡುತ್ತಾ ಕುಳಿತಿರುವುದೂ, ಹೆಂಗಳೆಲ್ಲಾ ಒಳಮನೆಯಿಂದಲೋ ಹೆಂಗಸರ ಸಾಲಿನಿಂದಲೋ ಬೇಕು ಬೇಕೆಂದೇ ನೆಪ ಹುಡುಕಿ, ಹೆಬ್ಬಾಗಿಲ ಬಳಿಗೆ ಸರಿದು, ಈ ವಿಚಿತ್ರಮೂರ್ತಿಯನ್ನು ನೋಡಿ ಕಿಟಕಿಟ ನಗುವುದೂ, ಸಣ್ಣ ಮಕ್ಕಳು, ತುಂಟಪೋಲಿಗಳು, ಸುತ್ತುಗಟ್ಟಿ ಕಣ್ಣನ್ನು ಅಗಲವಾಗಿ ತೆರೆದು—ಈ ವೀರಕಚ್ಚೆ ಬಿಗಿದು, ಖಡ್ಗವನ್ನು ನಡುವಿಗೆ ಸಿಕ್ಕಿಸಿ, ಜರತಾರಿ ಮುಂಡಾಸು ಹೊತ್ತು, ಒಬ್ಬ ಕುಳ್ಳ ಆಳುಮಗ ಹಿಡಿದಿದ್ದ ಶ್ವೇತಛತ್ರದಡಿಯಲ್ಲಿ ಕುಳಿತು ತಾಂಬೂಲ ಮೆಲ್ಲುವ ಪ್ರಾಣಿಯನ್ನು, ಕುತೂಹಲದಿಂದ ನುಂಗಿ ನೋಡುತ್ತಾ ಇರುವುದೂ, ಅಸಹ್ಯವಾದ ಸಂಕಟಕ್ಕೆ ಕಾರಣವಾಯಿತು. ಬಹದೂರು ಪರಾಕುಗಳು ಅಂದಿನಿಂದ

ಅರಮನೆ ತೋಟವನ್ನು ಬಿಟ್ಟು ಹೊರಕಾಲಿಡುವುದನ್ನು ನಿಲ್ಲಿಸಬೇಕಾಯಿತು. ಧರ್ಮಸ್ಥಳದ ದೀಪೋತ್ಸವ, ಸುಬ್ರಮಣ್ಯ ಷಷ್ಠಿ ಇವೆರಡಕ್ಕೇನೇಊ ಒಂದು ಕ್ಷಣ ಎಂಬಂತೆ ಹೋಗಿ ದೇವರನ್ನು ಕಂಡು ಹರಕೆ ಸಲ್ಲಿಸಿ ಮರಳುತ್ತಿದ್ದರು. ಉಡುಪಿಯ ಜನರ ಚೇಷ್ಟೆ ಹಾಸ್ಯಗಳನ್ನು ಎದುರಿಸಲು ಎದೆಸಾಲದೆ ಪರ್ಯಾಯೋತ್ಸವಕ್ಕೆ ಹೋಗುವುದನ್ನೇ ನಿಲ್ಲಿಸಿಬಿಟ್ಟರು. ಅಂದಿನಿಂದ ಅರಮನೆಯೊಳಗೆ ಸಾಹಿತ್ಯ, ಗ್ರಂಥಾಧ್ಯಯನ, ವೇದಾಂತ ಪಠನ, ವೇದಾಂತ ವಿಚಾರ, ಇವುಗಳದೇ ಜೀವನವಾಯಿತು. ಹೊರ ಜೀವನವೇ ನಿಂತಮೇಲೆ ಬಾಳೆಲ್ಲಾ ಒಕಸರಿಯದೆ ಬೇರೆ ಗತ್ಯಂತರವಿರಲಿಲ್ಲ. ಕುದುರೆಯಾಳು, ಗರಡಿ ಜಟ್ಟಿ, ಓಲೆಕಾರರು ಇತ್ಯಾದಿಗಳೆಲ್ಲಾ ದೂರಸರಿಸಲ್ಪಟ್ಟರು; ಪಂಡಿತರು, ಕವಿಗಳು, ವೇದಾಂತಿಗಳು, ವಿದ್ವಾಂಸರು, ಗಾಯಕರು, ಜ್ಯೋತಿಷಿಗಳು, ಚತುರ್ವೇದಿಗಳು ಇವರೆಲ್ಲಾ ಅರಮನೆಯ ಆಶ್ರಿತರಾದರು. ದೇವರು ಒಂದು ವಿಚಿತ್ರವನ್ನು ಕಲ್ಪಿಸುವಾಗ ಅದಕ್ಕೆ ಸಾಮರಸ್ಯವುಂಟಾಗುವಂತೆ, ಇನ್ನು ಹದಿನಾರು ವೈಚಿತ್ರ್ಯಗಳನ್ನು ನಿರ್ಮಿಸಿಯೇ ಇರುತ್ತಾನೆ. ತಿರುವನಂತ ಶಯನದಿಂದ, ಪದ್ಮನಾಭದಾನ ಸನ್ನಿಧಿಯಿಂದ ಒಬ್ಬ ಮೂರೂವರೆ ಅಡಿಯ ಜ್ಯೋತಿಷಿ ತಾಂತ್ರಿಕನೂ, ಮಹಿಷೂರಿಂದೊಬ್ಬ ಆಸ್ಥಾನವಿದ್ವಾಂಸನೂ ಬಂದು ಸೇರಿಕೊಂಡರು.

ಈತನ ಹೆಸರು ವಿದ್ಯಾ ದಿಗ್ಗಜ ತ್ರಿಭುವನ ಭೂಷಣ ಪೆದ್ದಾಪಂಡಿತನೆಂದು; ಗಾತ್ರವಾತ್ರ ಮೂರಡಿಯಷ್ಟೆ. ಶ್ರೀಮನ್ಮಹಾರಾಜರು ಒಂದಾನೊಂದು ಕಾಲದಲ್ಲಿ ಮೆಚ್ಚಿ ಇತ್ತ ಜರತಾರಿ ಪೇಟವನ್ನು ಹೊರಲಾರದೆ ಹೊತ್ತ ಮಹಾವಿಗ್ರಂತಿ; ಅದ್ಭುತ ಮೇಧಾವಿ. ಗುಣಗ್ರಾಹಿಗಳೂ ಸಮದೃಷ್ಟಿಯುಳ್ಳವರೂ ಆದ ಚಾಮರಾಜ ಒಡೆಯರು ಈತನ ಗಾತ್ರವನ್ನುವನ್ನು ನೋಡದೆ, ಪಾತ್ರವನ್ನೇ ವಿಚಾರಮಾಡಿ, ಅನೇಕ ಖಿಲ್ಲತ್ತುಗಳನ್ನೂ, ಬಹುಮಾನಗಳನ್ನೂ ದಯಪಾಲಿಸಿ ಗೌರವಿಸಿದ್ದರು. ಯಾವನೇ ದರಬಾರಿಯಾಗಲೀ, ನಕಲಿ ನಾರಣಪ್ಪನೆಂಬ‡ ತೆನ್ನಾಲಿ ರಾಮಕೃಷ್ಣನಂಥ ವಿದೂಷಕನೇ ಇರಲಿ, ಈ ಪಂಡಿತನನ್ನು ಹಾಸ್ಯಮಾಡಿ ಹೀಯಾಳಿಸದಂತೆ,

‡ ನಕಲಿ ನಾರಣಪ್ಪನ ಕುರಿತು ಕುತೂಹಲ ಹುಟ್ಟಿದರೆ, ಎಂ. ಎಸ್. ಪುಟ್ಟಣ್ಣನವರ "ಮಾಡಿದ್ದುಣ್ಣೋ ಮಹಾರಾಯ" ಓದಿ.

ಮೂದಲಿಸದಂತೆ ಕಟ್ಟಪ್ಪಣೆ ಮಾಡಿದ್ದರು. ಈ ರಾಜ ಗಂಡಭೇರುಂಡ ಒಲಿದು ಹರಸಿರುವಷ್ಟು ಕಾಲ ಈ ಕುತ್ಸಿತ ಕಾಕಾಳಿಯ ಕೂಗಾಟದ ಪರಿವೆಯೇನು ಎಂದು ಪಂಡಿತನೂ ತಿಳಿದು ನೆಮ್ಮದಿಯಿಂದ ಇದ್ದನು. ಆದರೆ ಒಂದು ದಿನ ಅಕಸ್ಮಾತ್ತಾಗಿ ಒಂದು ಅಚಾತುರ್ಯ ಘಟಿಸಿತು. ಪಂಡಿತ ಬರೆದ ಕಾವ್ಯರತ್ನವೊಂದರಿಂದ ಪ್ರೀತರಾಗಿ ಪ್ರಭುಗಳು ಒಂದು ಸುವರ್ಣ ಪದಕವನ್ನೂ ಒಂದು ದೊಡ್ಡ ರೇಶಿಮೆ ಶಾಲು ಜೋಡಿಯನ್ನೂ ದಯಪಾಲಿಸಿದರು. ಪಂಡಿತ ಶಾಲು ಜೋಡಿಯನ್ನು ಶಿರಸಾವಹಿಸಿ ಸ್ವೀಕರಿಸುವಾಗ, ಏನೋ ದುರ್ದೈವದಿಂದ, ಆ ಶಾಲು ಕೈಯಿಂದ ಕಳಚಿ, ಆ ಸಣ್ಣ ಪ್ರಾಣಿಯನ್ನು ಮುಚ್ಚಿ, ಕಾಲಿಡಿಗೆ ಸಿಕ್ಕಿಕೊಂಡುದರಿಂದ ಬಡಪಾಯಿ ಬಿದ್ದುಬಿಟ್ಟನಂತೆ. ಆಗ ಸಭಿಕರು ಪರಬಾರಿಗಳು ಆಕಾಶ ಬಿರಿವಂತೆ ನಕ್ಕರಂತೆ. ಸಭೆಗೆ ಸಭೆಯೇ ಘೊಳ್ಳೆಂದು ನಕ್ಕರೂ ಪಂಡಿತನಿಗೆ ಕ್ಲೇಶವಾಗುತ್ತಿರಲಿಲ್ಲ. ಆದರೆ, ಆ ಕ್ಷಣ, ಎಂದೆಂದೂ ಪಂಡಿತನಿಗೆ ಮುಖ ಭಂಗವಾಗಿಸುವ ಒಂದು ಚಕಾರವನ್ನು ಎತ್ತದ, ಸರ್ವದಾ ಪಂಡಿತನಿಗೆ ಮೆಚ್ಚುಮಾತುಕೊಡುವ ಗುಣಗ್ರಾಹಿ ಪ್ರಭುವಿಗೇ ತಪ್ಪಿ ಎಲ್ಲಿಂದಲೋ ಖಿಸಕ್ಕೆಂದು ನಗು ಉಕ್ಕಿ ಬಂದಿತಂತೆ. ಪಂಡಿತನಿಗೆ ಕಾಲಡಿಯಲ್ಲಿ ಪಾತಾಳವೇ ಬಾಯಾಕಳಿಸಿದಂತಾಯಿತು. ಆತನ ನೆಲ್ಲಿಯಗಾತ್ರದ ದೇಹದಲ್ಲಿನ ಬೆಟ್ಟದಗಾತ್ರದ ಆತ್ಮಗೌರವಕ್ಕೆ ಸಿಡಿಲೆರಗಿದ ಹಾಗಾಯಿತು ಒಂದು ಮಾತನ್ನೂ ಆಡದೆ ಮುಖ ಕೆಳಹಾಕಿ, ಸನ್ನಿಧಿಯನ್ನು ಬಿಟ್ಟವನು ಮತ್ತೆ ಆಸ್ಥಾನದಲ್ಲಿ ನೆರಳೂ ಹಾಯಿಸಲಿಲ್ಲ. ಪ್ರಭುಗಳು ಎಷ್ಟೇ ಒತ್ತಾಸೆಯಿಂದ ಹೇಳಿ ಕಳುಹಿಸಿದರೂ, ''ಪ್ರಭುಸನ್ನಿಧಿಗೆ ಪಾಮರನು ಯೋಗ್ಯನಲ್ಲ'' ಎಂದು ಹೇಳಿ ಬರದೇ ಹೋದನಂತೆ. ಈತನ ಹೆಸರು ಖ್ಯಾತಿ ಕೇಳಿ ತಿಳಿದು ಬಲಭೀಮೈಯ ಬಹದ್ದೂರು ತನ್ನಲ್ಲಿಗೆ ಕರೆಸಿಕೊಂಡು "ಸಂಸ್ಥಾನ"ದ ಪಂಡಿತನನ್ನಾಗಿ ನೇಮಿಸಿದರು.

ಹೀಗೆ ವೀರಬೀಡಿನಲ್ಲಿ ಒಂದು ವಿಚಿತ್ರವಾದ ವಾಮನಾವತಾರಿಗಳ ಬಳಗ ಉಂಟಾಯಿತು. ಪುಟ್ಟ ಪುಟ್ಟ ಅರಸ–ಅರಸಿ, ಗೊಂಬೆಗಾತ್ರದ ಜ್ಯೋತಿಷಿ, ವಿದ್ವಾಂಸ, ಸಾಹಿತಿ ಇತ್ಯಾದಿಗಳದೇ ಒಂದು ವಿಚಿತ್ರ ವಿಶ್ವ ನಿರ್ಮಿತವಾಯಿತು. ಸಾಮಾನ್ಯ ಗಾತ್ರದವರೆಲ್ಲಾ ಅಂದರ ನಾಲ್ಕಡಿ ಮಿಕ್ಕಿದ ಗಾತ್ರದವರೆಲ್ಲಾ ಒಬ್ಬೊಬ್ಬರಾಗಿ ದೊರೆಗಳ ಚಾಕರಿಯಿಂದ, ಪರಿವಾರದಿಂದ,

ಅರಮನೇ ಊಳಿಗದಿಂದ ನಿವೃತ್ತರಾಗತೊಡಗಿದರು ಅಡುಗೇ ಯಜ್ಞೇಶ್ವರ ಭಟ್ಟ, ಅಗ್ನಿಹೋತ್ರಿಗಳು, ಗರಡಿಮನೆ ಗಟ್ಟಿ, ಬೀಸಣಿಗೆ ಗರುಡಯ್ಯ, ಉದಯರಾಗದ ತುಂಬುರು ಸಾರಂಗ, ಓಲೇಕಾರ ಗುಮ್ಮಣ್ಣ, ಶಿಪಾಯಿ ಎಲ್ಲರೂ ಅರಮನೆಯನ್ನು ತೊರೆದು ಹೋಗಬೇಕಾಯಿತು. ಇವರ ಬದಲಿಗೆ ನೂರು ಊರು ಹುಡುಕಾಡಿ ವಾಮನಾಕೃತಿಯ ಜನರನ್ನೆಲ್ಲಾ ಚಾಕರಿಗೆ ಸೇರಿಸಿಯಾಯಿತು. ಈ ಯುಕ್ತಿಯಿಂದ ದೊರೆಗೆ ಅನುನಿತ್ಯ ಮಹಾಗಾತ್ರದವರನ್ನು ಕಂಡರಾಗುವ ಅಪಮಾನ, ಮುಖಭಂಗ, ತಿರಸ್ಕಾರದ ಭಯ ಇವುಗಳೆಲ್ಲದರ ಪೀಡೆ ತಪ್ಪಿಹೋಯಿತು. ಹೊರಗಿಂದೇನೋ ಜನ ಗಹಗಹಿಸಿ ನಕ್ಕು, ಸೀಮೆಗೊಂದು ಚೋದ್ಯ ಎಂದು ಬೆಟ್ಟು ತೋರಿಸುತ್ತಿದ್ದಿರಬಹುದು. ಆದರೆ ವೀರಬೀಡು ಜಹಗೀರಿನ ವಿಸ್ತೀರ್ಣದಲ್ಲಿ ವಾಮನರಾಜ್ಯದಲ್ಲಿ, ವಾಮನಾಕೃತಿಯ ದೊರೆಯ ದರಬಾರು, ವರ್ಚಸ್ಸು ನಡೆದು ಹೋಗುತ್ತಿದ್ದುವು.

ಸಹಜವಾಗಿಯೇ ಈ ವಿಚಿತ್ರ ವಾತಾವರಣದಲ್ಲಿ ವಿಚಿತ್ರ ಭಾವನೆಗಳು, ವಿಚಿತ್ರ ವಿಚಾರಗಳು ಮೂಡಿದುವು. ದೊರೆಗಳೂ, ವಿದ್ಯಾದಿಗ್ಗಜ ಪೆದ್ದ ಪಂಡಿತನೂ, ಜ್ಯೋತಿಷಿಯೂ ಒಂದು ತತ್ವವನ್ನೇ ನಿರ್ಮಿಸಿದರು. "ಈಶ್ವರನ ಸೃಷ್ಟಿಯಲ್ಲಿ ಪರಮಾತ್ಮನ ಪಡಿಯಚ್ಚಾದ ಮಾನವ ಕಾಲಾನುಕಾಲ ಸೂಕ್ಷ್ಮರೀತಿಯಾಗುತ್ತಾ ಹೋಗುತ್ತಾನೆ. ತ್ರೇತಾ, ಕೃತ ಯುಗಗಳಲ್ಲಿ ಧರಿತ್ರಿಯಲ್ಲಿದ್ದ ಅಸುರ ದಾನವರು, ದೈತ್ಯರು ರಕ್ಕಸರು ಪ್ರಚಂಡಗಾತ್ರರು, ಬೆಟ್ಟದಂಥ ಶರೀರವುಳ್ಳವರು; ತಾಳೆಯಂಥ ಅಂಗಾಂಗವುಳ್ಳವರು; ಹತ್ತು ತಲೆ ಇಪ್ಪತ್ತು ಕೈಯುಳ್ಳವರು. ಆದರೆ ಮಾನವನೋ ಸಣ್ಣ ಪ್ರಾಣಿ: ಸುರರಂತೂ ಸೂಕ್ಷ್ಮಶರೀರಿಗಳಷ್ಟೆ. ಸರ್ವಶಕ್ತನಾದ ಭಗವಂತನಂತೂ ಅಶರೀರಿಯು. ವಿಶ್ವಲೀಲಾಲೋಲನಾದ ಶ್ರೀಕೃಷ್ಣನಿಗಿಂತ ಪೂತನೆ, ಕೇಶಿ, ವೃಷಭ, ಕಂಸ, ಕಾಳಿಂಗರೆಲ್ಲಾ ನೂರುಪಾಲು ದೊಡ್ಡದಾದ ಮಾತ್ರಕ್ಕೇ ಶ್ರೀಕೃಷ್ಣ ಕೀಳಾದನೇ?. . . .ಸ್ಥೂಲವಾದುದೆಲ್ಲ ಜಡ, ತಾಮಸ: ಸೂಕ್ಷ್ಮವಾದುದೆಲ್ಲ ವಿಶುದ್ಧ, ಪವಿತ್ರ, ಆತ್ಮಿಕ, ಪಾರಮಾತ್ಮಿಕ ಎಂದು ವಾದಿಸಿದರು ಸ್ಥೂಲವೂ, ವಿಶಾಲವೂ ಆದ ಬೃಹದಾಕಾರವುಳ್ಳ, ಪರ್ವತಸದೃಶ ಮೇಘ ಸಮೂಹ ದೊಡ್ಡದೇ, ಅತಿ ಸೂಕ್ಷ್ಮವೂ, ಗಾತ್ರರಹಿತವೂ ಆದ ಸೌದಾಮಿನಿ

(ಮಿಂಚು) ಹಿರಿಯದೇ? ಸೂಕ್ಷ್ಮವಾದುದೆಲ್ಲ ತೇಜಃಪುಂಜವು. ಪರಬ್ರಹ್ಮನ ವಿಧಾನದಂತೆ ಸೃಷ್ಟಿಯೇ ಸೂಕ್ಷ್ಮತ್ವಪಡೆಡೆ ಸಾರುತ್ತಿದೆ. ಘೋರ ವಿಶಾಲ ವಾದ ಕೂರ್ಮ, ವರಹಾದ್ಯವತಾರಗಳ ಪಶ್ಚಾತ್ ಸೃಷ್ಟಿಕರ್ತನೇ ವಾಮನ, ರಾಮ, ಬುದ್ಧಾದ್ಯವತಾರಗಳನ್ನು ಎತ್ತಲಿಲ್ಲವೇ? ಈ ಭೂಮಿಯ ಭವಿತವ್ಯ ವಾಮನಾಕಾರಿಗಳ ಕೈಯಲ್ಲಿದೆ. ಮುಂದಿನ ಜಗತ್ತಿನಲ್ಲಿ, ಕಲಿಯುಗದ ಉತ್ತರಾರ್ಧದಲ್ಲಿ ಸೂಕ್ಷ್ಮ ದೇಹಿಗಳ ಸತ್ತೆಯಾಗುವುದು. ಒಂದುಕಾಲ ಜಂಬೂ ದ್ವೀಪದಲ್ಲಿ ಪರ್ವತಾಕಾರವನ್ನುಳ್ಳ ರಕ್ಕಸರೂ ದಸ್ಯುಗಳೂ ನೆಲ ಸಿದ್ದರು. ಆದರೆ ದಿತಿಯ ಸಂತಾನವಾದೀ ಬೃಹದ್ ಶರೀರಿಗಳು ಉಳಿಯ ಲಿಲ್ಲ. ಸಣ್ಣ ಗಾತ್ರದ ಆರ್ಯರು ಬಂದು ನೆಲಸಿ ಆರ್ಯಾವರ್ತವೆಂಬ ಪುಣ್ಯಭೂಮಿಯನ್ನು ಸೃಜಿಸಿದರು. ಪರಮಾತ್ಮನೇ ಸಾಕ್ಷಾತ್ತಾಗಿ, ಈ ಭಾವೀ ಜಗತ್ತಿನ ರಚನೆಗಾಗಿ ಕೀರ್ತಿಶಾಲಿಯಾದ ವೀರಬೀಡು ವಂಶದಲ್ಲಿ ಬಲಭೀಮ್ಮೆಯನನ್ನು ಸೃಷ್ಟಿಸಿದ್ದಾನೆ. ಈತನ ಯೋನಿಯಿಂದ ಮುಂದಿನ ಭವ್ಯ ಸಂಸಾರದ ನಾಯಕರುತ್ಪನ್ನರಾಗುವರು'' ಎಂದು ಘೋಷಿಸಿದರು. ತಿರುವನಂತ ಶಯನದ ಜ್ಯೋತಿಷಿ ಪಂಚಾಂಗ ಎಣಿಸಿ, ಕವಡೆ ಹರಡಿ, ಓಲೆಯ ಗ್ರಂಥಗಳನ್ನು ಬಿಚ್ಚಿ, ಅವಲೋಕಿಸಿ, ಕಲಿಯುಗದಲ್ಲಿ ನಂದ ದಿನ ಗಳನ್ನೆಣಿಸಿ, ಈ ತತ್ವ ಸತ್ಯವೆಂದೂ, ಬಲಭೀಮ್ಮೆಯರಸು ಯುಗಪುರುಷನ ತಂದೆಯಾಗುವನೆಂದೂ ಪ್ರಮಾಣಪಡಿಸಿದನು. ತ್ರಿಭುವನ ಪೆದ್ದಪಂಡಿತರೂ ಬಲಭೀಮ ವಿಜಯವೆಂಬ ಮಹಾಕಾವ್ಯವೊಂದನ್ನು ವಿರಚಿಸಿ, ಇದೇ ತತ್ವ ವನ್ನು ಅಲಂಕಾರವಾಗಿ ವರ್ಣನಾವೈಭವ, ಕಲ್ಪನಾ ಸಂಪತ್ತಿಯೊಡನೆ ಬೆಳ ಗಿಸಿದರು. ದೊರೆ, ಅರಸಿ, ಮತ್ತು ಓಲೈಸಿಕೊಂಡವರು, ಈ ವಿಚಿತ್ರ ಕಲ್ಪನೆ ಗಳ ಲೋಕದಲ್ಲಿ, ಚೋದ್ಯ ವಿಚಾರಗಳ ವಾತಾವರಣದಲ್ಲಿ ಕನಸಿಗರಂತೆ ವಿಹರಿಸುತ್ತಿದ್ದರು.

ಶರೀರಧರ್ಮಾನುಗುಣವಾಗಿ ಅರಸಿ ಬಸುರಿಯಾದಳು. ದೊರೆ, ತನಗೆ ವಂಶೋದ್ಧಾರಕನೂ, ಸದ್ಗತಿದಾಯಕನೂ ಆದ ಸುಪುತ್ರನು ಜನಿಸಬೇಕೆಂದು, ನೂರು ದೇವ ದೇವಿಯರಿಗೆಲ್ಲಾ ಹರಕೆ ಹೊತ್ತನು. ಜ್ಯೋತಿಷಿಯು ಜಾತ ಕಂಗಳನ್ನು ಸ್ಫುಟಗೊಳಿಸಿ, ನಕ್ಷತ್ರಗಳನ್ನು ಗುಣಿಸಿ ತೇಜಃಪುಂಜನೂ, ವೀರಬೀಡು ವಂಶಕಿರೀಟನೂ, ಸೂಕ್ಷ್ಮದೇಹಿಯೂ ಆದ ಕುಮಾರಕನು

ಅವತರಿಸುವನೆಂದೂ, ಮುಂದಿನ ಸೂಕ್ಷ್ಮಶರೀರಗಳ ಜಗತ್ತಿಗೇ ಅಗ್ರಣಿಯಾಗುವನೆಂದೂ, ಹೇಳಿ ಆತನಿಗೆ ವಿಜಯ ವಾಮನನೆಂದು ಶುಭಾಭಿದಾನವನ್ನು ಇಡಬೇಕೆಂದೂ ವಿಧಿಸಿದನು. ಪೆದ್ದಪಂಡಿತನೂ ಸ್ವಸ್ತಿವಾಚನಂಗಳನ್ನೂ, ವಂಶಾವಳಿಗಳನ್ನೂ, ಘನಕಾವ್ಯಗಳನ್ನೂ, ವಿರಚಿಸತೊಡಗಿದನು.

ಜ್ಯೋತಿಷಿಯ ಮಾತು ಸುಳ್ಳಾಗಲಿಲ್ಲ. ಗಂಡು ಶಿಶುವೇ ಹುಟ್ಟಿತು. ಸುಮುಹೂರ್ತದಲ್ಲಿ, ಘಂಟಾಶಂಖ ಘೋಷಗಳೊಡಗೂಡಿ, ಜಹಗೀರಿಯ 'ಪ್ರಜ' ರಿಗೆಲ್ಲಾ ಸಕ್ಕರೆ ಕೇಸರಿಗಳನ್ನು ಬೀರುತ್ತಾ, ವೀರಬೀಡು ವಂಶೋದ್ಧಾರಕನಾದ ಶ್ರೀ ವಿಜಯವಾಮನ ಬಹದ್ದೂರು ಪರಾಕು ಜನಿಸಿದನು. ಶಿಶು ಹೃಷ್ಟಪುಷ್ಟವಾಗಿ ಆರೋಗ್ಯವಾಗಿ ಪುಟವಾಗಿ ಅರಸು, ಅರಸಿ, ಮತ್ತವರನ್ನೋಲೈಸಿದವರ ಮನವನ್ನು ಹಿಗ್ಗಿಸುತ್ತಿತ್ತು.

ಪುಣ್ಯಾರ್ಚನೆ, ನಾಮಕರಣ, ಆಶೀರ್ವಚನ ಇತ್ಯಾದಿ ಉತ್ಸವವಿಶೇಷಗಳೆಲ್ಲಾ ಮಹೋಲ್ಲಾಸ ಸಂಭ್ರಮಗಳಿಂದ ನಡೆದುವು. ದೊರೆ, ಭವಿಷ್ಯೋದ್ಧಾರಕನೂ ನವ ಜಗ ನಿರ್ಮಾಣಪುರುಷನೂ ಕಲ್ಕಿಸಮಾನನೂ ಆದ ಅವತಾರಿಯುದ್ಭವಿಸಿದನೆಂದು ಸಂತಸಪಟ್ಟನು. ದಿನವೂ ಮಗುವಿನ ತೊಟ್ಟಿಲ ಬಳಿ ಕುಳಿತು ಕನಸುಗಳನ್ನು ಕಟ್ಟುತ್ತಾ, ಭಕ್ತಿ ಶ್ರದ್ಧೆಗಳಿಂದ ತೊಟ್ಟಿಲುತೂಗುತ್ತಾ, ಜ್ಯೋತಿಷಿಯ ಭವಿಷ್ಯದ್ವಾಣಿಯನ್ನೂ, ಪೆದ್ದಕವಿಯ ಸ್ವಸ್ತಿಗೀತಗಳನ್ನೂ, ಆಲಿಸುತ್ತಾ, ಶಿಶು ಶುಕ್ಲಪಕ್ಷದ ಚಂದ್ರನಂತೆ ವರ್ಧಮಾನನಾಗುವುದನ್ನು ಕಾಣುತ್ತಿದ್ದನು. ಆದರೆ ಕಾಲ ಹೋಗಂತೆ, ದೊರೆಯ ಹೃದಯದಲ್ಲಿನ ಕನಸು, ಆಶೆ, ಪೂಜ್ಯಭಾವನೆಗಳೊಳಗೆ ಎದೆನಡುಗಿಸುವ ಶಂಕೆ, ಅಶುಭ ಚಿಂತನೆ ಮೂಡಿತು. ಆ ಭವಿಷ್ಯಸ್ವಪ್ನಮಗ್ನ ಮನಸ್ಸಿನಲ್ಲಿ ಭಯದ ಮೋಡಗಳು ಕವಿದುವು. ಏಕೆಂದರೆ ಈ ವಂಶೋದ್ಧಾರಕನು, ಯುಗ ಪುರುಷನು, ಅವತಾರಿಯು, ಸೂಕ್ಷ್ಮಶರೀರಿಯಾಗಿರುವಂತೆ ತೋರಲಿಲ್ಲ. ವಿಜಯವಾಮನ ಬಹಾದ್ದೂರಿನ ಗಾತ್ರ ವಾಮನ ಮೂರ್ತಿಯ ಗಾತ್ರದಂತೆ ಇರಲಿಲ್ಲ.

ಅರಸು ಮಗನಿಗೆ ಐದುವರುಷ ಪ್ರಾಯವಾದಾಗ ತಂದೆಗಿಂತ ಐದಂಗುಲವೂ ತಾಯಿಗಿಂತ ಎರಡಂಗುಲದಷ್ಟು ಹೆಚ್ಚು ಉದ್ದ ಬೆಳೆಯಿತು. ನಾಲ್ಕು ವರುಷದ ಮಗುವಾಗಿದ್ದಾಗ ತಾಯಿ ಎತ್ತಿಕೊಂಡು ಅಪ್ಪಿದಾಗ ಹೊರ

ಲಾರದೆ ಬಿದ್ದಿದ್ದಳು. ಎಂದೋ ಕುಬ್ಜೆಯಾದ ದಾದಿಯನ್ನು ಬಿಡಿಸಿ, ದೊಡ್ಡ ಆಕಾರದ ದಾದಿಯೊಬ್ಬಾಕೆಯನ್ನೇ ಮೊಲೆಯೂಡಿಸಲು ನೇಮಿಸಬೇಕಾಗಿತ್ತು. ಮಗು ತಂದೆಯೊಡನೆ ಚೆಲ್ಲಾಟವಾಡಿ ಮೀಸೆಯನ್ನು ಹಿಡಿದೆಳೆದಾಗ, ಬಲಭೀಮ್ಯಯ್ಯ ಬಹದ್ದೂರು ತನ್ನ ವಂಶದ ಪೂರ್ವಖ್ಯಾತಿಯನ್ನೂ, ವಜ್ರಮಲ್ಲ ಗುಂಡರಸನ ಪರಾಕ್ರಮವನ್ನೂ, ನೆನೆದು, ಆಂಜನೇಯನನ್ನು ಸ್ಮರಿಸಿ, ತುಟಿ ಕಚ್ಚಿ, ಹಲ್ಲು ಬಿಗಿದು, ನೋವನ್ನು ತಡೆದುಕೊಳ್ಳಬೇಕಾಗುತ್ತಿತ್ತು. ಅಂತೂ ದೊರೆಯ ಕನಸಿನ ಲೋಕ, ಸೂಕ್ಷ್ಮಶರೀರಿಗಳ ಭವಿಷ್ಯ, ಚೂರು ಚೂರಾಯಿತು. ಜ್ಯೋತಿಷಿಗೆ ಒಂದು ವರುಷದ ಪಗಾರವನ್ನು ಕೊಟ್ಟು ಆತನ ಮೋರೆಯನ್ನು ನೋಡದೇನೇ ಸಂಸ್ಥಾನದಿಂದ ಹೊರಗಟ್ಟಿದರು.

ಹುಡುಗನಿಗೆ ಹದಿನೈದು ವರುಷವಾಗುವತನಕವೇನೋ ಆತನನ್ನು ಆಳುವ ಕೆಲಸವನ್ನು, ಕಷ್ಟಸಾಧ್ಯವೇ ಆದರೂ ನಡೆಸಿದರು ಮತ್ತೆ ಮಾತ್ರ ಅಸಾಧ್ಯವಾಯಿತು. ತಂದೆಯ ಮೂರು ಪಾಲಷ್ಟು ಬೆಳೆದ, ಗಟ್ಟಿಮುಟ್ಟಾದ, ಬಲಿಷ್ಠನಾದ ಹುಡುಗನಿಗ ಚೋಟುದ್ದದ ತಂದೆ-ತಾಯಿಗಳನ್ನು ಕಂಡರೆ ನಗು ಬರುತ್ತಿತ್ತು. ಆತನಿಗೆ ಅಕ್ಷರಾಭ್ಯಾಸ ಮಾಡಿಸಲೆಂದು ನಿಯಮಿಸಿದ ಪೆದ್ದ ಪಂಡಿತನ ಮುಂಡಾಸು ಕಿತ್ತು ತಲಕೆಳಗಾಗಿ ಎತ್ತಿ ಬೀಸಿ, ಭಾವಿಯೊಳಗೆ ಹಿಡಿದು ಪೀಡಿಸಿ ಹಿಂಸಿಸುತ್ತಿದ್ದ. ಅಡುಗೇಭಟ್ಟನನ್ನು ಎಣ್ಣೆಯ ಕಡಾಯಿಯಲ್ಲಿ ಮುಳುಗೇಳಿಸಿದುದೂ ಉಂಟು. ದೊರೆ ಒಡ್ಡೋಲಗದಲ್ಲಿ ಗದ್ದಿಗೆಯಮೇಲೆ ಕುಳಿತಾಗ ಗದ್ದುಗೆಯನ್ನು ನೂಕಿ ಅರಸರನ್ನು ಮಗುಚಿ ಹಾಕಿದ್ದೂ ಹಾಕಿದ್ದೆ. ದೊರ ಈ ಕಾಟ ಪುಂಡಾಟ ತಡೆಯಲಾರದೆ, ಹಾಸನಕ್ಕೆ ತನ್ನ ಮಾವಯ್ಯನ ಮನೆಗೆ ಅರಸು ಮಗನನ್ನು ಕಳಸಬೇಕಾಯಿತು. ಒಂದಿಷ್ಟು ಕಾಲ ದೂರವೇ ಉಳಿದರೆ ಮಗನಿಗ ಬುದ್ಧಿ ಬಂದೀತು. ಸಿಂಹನ ಹೊಟ್ಟೆಯಲ್ಲಿ ನರಿ ಎಲ್ಲಾದರೂ ಹುಟ್ಟುವುದುಂಟೇ? ವೀರಬೀಡು ವಂಶದಲ್ಲಿ ಪಾಖಂಡಿ ಜನಿಸಿಯಾನೇ? ಯುಗಪುರುಷನೇನೋ ಅಲ್ಲವೇ ಆದರೂ ರಾಜಪುರುಷನೇ ಸರಿಯಷ್ಟೆ? ಹೇಗೇ ವಿಚಾರಿಸಿದರೂ, ಏನೋ ಹೃದಯದಲ್ಲಿ ವ್ಯಸನ, ಆತಂಕ ಶಂಕೆಗಳು ಉಳಿಯದೇ ಹೋಗಲಿಲ್ಲ

ಹಾಸನಕ್ಕೆ ಆಗಾಗ್ಗೆ ಮಗನಿಗೆ ಘನಗಂಭೀರವಾಗಿ, ಉಪದೇಶ ಪೂರ್ವಕವಾಗಿ ಕಾಯಿದೆಗಳನ್ನು ಬರೆಯಿಸಿ, ರಾಜಯೋಗ್ಯವಾದ ಒಕ್ಕಣೇ

ಸಹಿತ ಓಲೇಕಾರರ ಕೈಲಿ ಕಳಿಸುತ್ತಿದ್ದರು: "ಶ್ರೀಮದಾಂಜನೇಯಾಶ್ರಿತ ಮೂಲೋಕದಮಾನೆ ಪ್ರಚಂಡ ಬಿರುದಾಂಕಿತ, ವೀರಬೀಡಾಧೀಶ ತುಳು ನಾಡಗಂಡ ಬಲಭೀಮೈಯ ಬಹದೂರ ವರಾಕು.... ...ಪ್ರೇಮಪೂರ್ವಕ ಯುವರಾಜ ವಿಜಯ ಹಸುನು ಚಿರಂಜೀವಿಗೆ ಮಾಡುವ ಆಶೀರ್ವಚನ ಯುಕ್ತಾಣತಿಗಳು ... ...ಸಾಂಪ್ರತ ... ..." ಎಂದು ಕ್ಷೇಮ, ಕುಶಲ ವಿಚಾರ ವಾಗುತ್ತಿತ್ತು.

+ + + + + +

ಒಂದೈದಾರು ವರುಷಗಳಾದರೂ ಅರಸುಮಗ ಮನೆಗೆ ಮರಳಿರಲಿಲ್ಲ. ಹಾಸನದಲ್ಲೂ ಅಜ್ಜನೊಡನೆ ಇರಬು ಕೇಳದೆ, ತಿರುಗೂಳಿಯಾಗಿ ಊರೂರು ಅಲೆದು, ಮಧುರೆ, ಕುಂಭಕೋಣ, ಕಾಂಚಿಗಳೆಲ್ಲಾ ತಿರುಗಿ, ದುರ್ಮಾರ್ಗರ ಸಂಗ ಬೆಳೆಸಿದ.ಆಗತಾನೆ ಬೆಳೆದು ಬರುತ್ತಿದ್ದ ಚೆನ್ನಪಟ್ಟಣ, ಜಾರ್ಜ್ ಕೋಟೆ, ಕಪ್ಪುಪೇಟೆಗಳಲ್ಲೂ ಅಂಡಲೆದು. ಅಲ್ಲಿನ ಚಟ್ಟೀಗಾರರ ಸಹವಾಸ ಬೆಳೆಸಿ ದುರ್ವ್ಯಸನದ ವಿಷಯ ಭೋಗಗಳನ್ನೆಲ್ಲ ಕಲಿತು ಪಾರಂಗತನಾದ. ಬೆಂಗಳೂರು ದಂಡಿನ ನೆರೆಹೊರೆಯಲ್ಲಿ ಶಿಪಾಯಿಗಳ ಪಾಕ್ಯದ ವಿದೇಶೀ ಬಂಗಾರದವುಗಳ ಸಂಗ ಬೆಳೆಸಿದ. ಮನೆಯಿಂದ ಹಣ ಸೆಳೆದು ಕ್ಷೀಣ ವಾಗಿದ್ದ ವೀರಬೀಡು ಸಂಪತ್ತನ್ನು ಇನ್ನೂ ಕರಗಿಸಿದ.

ಇದೇ ಕಾಲಕ್ಕೆ ಅರಸಿಗೆ ಅಂದರೆ ಆತನ ತಾಯಿಗೆ ಕಾಯಿಲೆ ಹಿಡಿಯಿತು. ಹಾಸಿಗೆ ಹಿಡಿದಳು. ಅವಸಾನ ಕಾಲದಲ್ಲಿ ಮಗನ ಕುರಿತಾದ ಭಯವನ್ನು ತಾಯಿ ಕರುಳಿನ ಪ್ರೀತಿ ಮರೆಸಿತು. ಮಗನನ್ನು ಕಂಡೇ ಸಾಯಬೇಕೆಂದು ಕರುಳು ಕಾಡಿತು. ದೊರೆ, ಮಗನಿಗೆ ಒಮ್ಮೆ ಬಂದು ಹೋಗೆಂದು ಆಗ್ರಹದಿಂದ ಕರೆದರು. ಕೊನೆಗೆ ಬೇರೇ ಉಪಾಯಗಾಣದೆ, ಬರದೇ ಹೋದರೆ ಮುಂದಕ್ಕೆ ಹಣವನ್ನೇ ಕಳಿಸುವುದಿಲ್ಲವೆಂದು ಬೆದರಿಸಿದಾಗ, ಮನಸ್ಸಿಲ್ಲದ ಮನಸ್ಸಿಂದ, ಗತ್ಯಂತರವಿಲ್ಲದೆ, ಬರುವೆನೆಂದೂ, ತನ್ನೊಡನೆ ನಾಲ್ಕೈದು ಮಂದಿ ತನ್ನ ಗೆಳೆಯರೂ ಬರುವರೆಂದೂ, ಅವರನ್ನು ಉಪಚರಿಸಬೇಕೆಂದೂ ಕಾಗದ ಬರೆದ.

ನಿಶ್ಚಿತ ದಿನ, ಅರಸುಮಗ ತನ್ನ ಭೋಗಕಳಂಕಿತವಾದ ಆರಡಿ ಗಾತ್ರವನ್ನೂ, ಮಿತ್ರಪರಿವಾರವನ್ನೂ, ಬೀಡಿಗೆ ಕರೆತಂದ. ತುರುಕರದೋ ಫರಂಗಿ

ಯವರದೋ ಮರ್ಜಿಯ ಪೋಶಾಕುತೊಟ್ಟು ಬಾಯಲ್ಲಿ ದಿಂಡಿಗಲ್ಲಿನ ಚಿರೂಟಿನ ಹೊಗೆಯುಗುಳುತ್ತ, ಕಾಲಲ್ಲಿ ಮೊಗಲಾಯಿ ಪಾಪಾಸು ಧರಿಸಿ, ತಲೆಯ ಮೇಲೆ ಜರಿಯ ಮರಾಠೀ ಪಾಗು ಹೊತ್ತು, ಕೈಯಲ್ಲಿ ಚಿನ್ನದ ಹಿಡಿಯ ವಿಲಾಯತೀ ಬೆತ್ತವನ್ನು ಕುಣಿಸುತ್ತ ಅರಮನೆಯ ಮಹಾದ್ವಾರವನ್ನು ಪ್ರವೇಶಿಸಿದ. ದೀವಟಿಗೆಕಾರರೂ, ಓಲೆಕಾರರೂ, ಆಳುಗಳೂ, ತೋರಣದಿಂದ ಅಲಂಕೃತವಾದ ಮಹಾದ್ವಾರದೆಡೆ ನಿಂತು, ತುಪಾಕಿ ಹಾರಿಸಿ, ಢೋಲು ನಗಾರಿ ಬಡಿದು, ಮಂಗಳವಾದ್ಯವನ್ನೂದಿ, ಚಿಕ್ಕರಸನನ್ನು ಸ್ವಾಗತಿಸಿದರು. ಜಾಗೀರಿಯ ಹೆಣ್ಣುಮಕ್ಕಳು, ಸುಮಂಗಲಿಯರು ದೊರೆಯಾಜ್ಞೆಯಂತೆ, ಹಾಡಿ ಆರತಿಯೆತ್ತಿದರು. ಆಸ್ಥಾನದ ವಂದಿಗಳು ಒನಗೆಯನ್ನು "ಭೋ ...ಸ್ವಸ್ತಿ ...!" ಎಂದು ಘೋಷಿಸಿದರು.

ವಿಜಯವಾಮನ ತನ್ನ ಸಂಗಡಿಗರೆಡೆಗೆ ಒಮ್ಮೆ ತೀವ್ರ ನಾಚಿಕೆ ಅವಮಾನಗಳು ಕೂಡಿದ ದೃಷ್ಟಿ ಎಸೆದ. ಅವನ ಸಂಗಡಿಗರು ಖೊಕ್ಕೆಂದು ನಕ್ಕರು. ದೀವಟಿಗೆಕಾರರು ಮೊದಲಾದವರ ವಾಮನಾಕಾರ ಅವರಿಗೆ ಸೋಜಿಗ ಉಂಟುಮಾಡಿರಬೇಕು. ಸಂಗಡಿಗರಲ್ಲೊಬ್ಬ ದಪ್ಪನಾಗಿ ಕೊಬ್ಬಿದ್ದ ಮರಾಠಿಗ; ಒಬ್ಬ ಕೆಂಪನಾದ ಕೆಂಚು ಕೂದಲ ಕೆಂಚು ಮೀಸೆಯ ಚಟ್ಟಿಗಾರ, ಮಗದೊಬ್ಬಳು ಮಧುರೆಯ ನಾಚು—ರಂಗಿನನಾರಿ. ಈ ನರ್ತಕಿ ವಿಜಯವಾಮನನೆಡೆ ಕಣ್ಣು ಮಿಟುಕಿಸಿ, ನಾಲಿಗೆ ಚಾಚಿ ಅಣಕಿಸಿದಳು.

ಅರಮನೆಯ ಒಳಬಾಗಿಲಲ್ಲಿ ಬಲಭೀಮೈಯ ಅರಸರು, ಜರ್ಜರೆಯಾಗಿ ನಿಶ್ಯಕ್ತಳಾದ ಅರಸಿಯನ್ನು ಆಧರಿಸಿ ಹಿಡಿದು ನಿಲ್ಲಿಸಿ, ಮಗನನ್ನು "ಬಾ, ಮಗೂ" ಎಂದು ಸ್ವಾಗತಿಸಿದರು ಮಗ ಸಂಪ್ರದಾಯದಂತೆ ತಂದೆಗೆ ಅಡ್ಡಬಿದ್ದು ಸಾಷ್ಟಾಂಗಪ್ರಣಮಿಡಲಿಲ್ಲ. ತಂದೆಯ ಮುಖ ಕೆಂಪೇರಿತು. ತಾಯಿ ವ್ಯಾಕುಲದಿಂದ ಮಗನನ್ನೇ ದೀನಳಾಗಿ ದಿಟ್ಟಿಸಿದಳು. ಮಧುರೆಯ ಮಾಯಾವಿ ಹೆಣ್ಣು ಈ ಜೋಟುದ್ದದ ಅರಸು–ಅರಸಿಯನ್ನು ಕಂಡು ಹೊಟ್ಟೆಯನ್ನೆರಡೂ ಕೈಯಿಂದ ಅದುಮಿ ಹಿಡಿದು ಕಿಲ ಕಿಲ ಎಂದು ನಕ್ಕಳು. ಕೆಂಚಗಿನ ಚಟ್ಟಿಗಾರ ಗಹಗಹಿಸಿ ಕೆಂಡಕೆಂಪಗಾದ.

ಬಲಭೀಮೈಯ ಅರಸುವಿನ ಕಣ್ಣಲ್ಲಿ ಕತ್ತಲು ಬಂದಂತಾಯಿತು. ಆದರೆ ವೀರಬೀಡಿನ ವಂಶದ ಸ್ಥೈರ್ಯ, ಘನತೆ ಬಿಡಲಿಲ್ಲ. ತಾನು ಕುಸಿದು

ಬಿದ್ದರೆ, ವಿಹ್ವಲನಾದರೆ, ತನ್ನನ್ನು ತಕಮುಕ್ಕಿ ಹಿಡಿದ, ಮರಣಾಸನ್ನೆಯಾದ ಅರಸಿಯ ಪಾಡೇನು ಎಂದುಕೊಂಡು, ಯಾವ ಅವಮಾನವನ್ನೂ ಕಾಣದವನಂತೆ ನಟಿಸಿ, ಎದೆಯನ್ನಮುಕಿದ ಕ್ಲೇಶವನ್ನು ನುಂಗಿ, ಬಿಗಿದ ಕಂಠದಿಂದ "ಮಗು, ದೀರ್ಘಾಯುವಾಗು; ಕೀರ್ತಿವಂತನಾಗು. ಬಾ, ಕಾಲು ತೊಳೆ; ನಿನ್ನ ತಾಯಿ ನಿನ್ನನ್ನೇ ಕಂಡು ಕಣ್ಣು ಮುಚ್ಚಬೇಕೆಂದಿದ್ದಾಳೆ; ಬಾ ಮಗು" ಎಂದು ಗಂಭೀರವಾಗಿ ಅಂದರು.

ಈ ಗಾಂಭೀರ್ಯವನ್ನು ಕಂಡಂತೂ ಅತಿಥಿಗಳ ಕೂಟದಲ್ಲಿ ನಗೆಯ ಕೋಲಾಹಲವೇ ಎದ್ದಿತು. ಮಧುರೆಯ ಸಾನಿಯಂತೂ ಬಿದ್ದು ಬಿದ್ದು ಅರಸು ಮಗನ ಹೊಟ್ಟೆ ಚುಚ್ಚಿ ಚುಚ್ಚಿ, ಬೆನ್ನುತಟ್ಟಿ ನಕ್ಕಳು. ಅರಸು ಮಗನ ಮುಖ ಉರಿಯಿತು. ಬಹಳ ಕಷ್ಟಪಟ್ಟು ನಗವನ್ನು ನಟಿಸಿದ.

ದೊರೆ ಅಪ್ರತಿಭರಾದರೂ, ತಮ್ಮ ಠೀವಿ, ಗಾಂಭೀರ್ಯಗಳನ್ನು ಬಿಡದೆ ಕುಶಲ ಪ್ರಶ್ನೆಗಳನ್ನು ಮಾಡಿದರು ಕೊನೆಗೆ ಊಟಕ್ಕಾಯಿತು.

ಊಟದ ಹೊತ್ತಿನಲ್ಲಿ ಚಿಕ್ಕರಸ ಮತ್ತು ಸಂಗಡಿಗರು ಒಂದು ಅಸಹ್ಯವಾದ ಉದ್ಧಟತನವನ್ನು ತೋರಿಸಿದರು. ಭೋಜನಶಾಲೆಯಲ್ಲಿ ಚಟ್ಟಿಗಾರ ಮತ್ತು ಜಾತಿಯಿಲ್ಲದ ಸಾನಿಯನ್ನು ಕೂಡಿಸಿ ಮುಖ್ಯಪ್ರಾಣನನ್ನು ಭ್ರಷ್ಟಪಡಿಸಿದುದೂ ಅಲ್ಲದೆ, ತಮ್ಮೊಡನೆ ತಂದಿದ್ದ ದೊಡ್ಡ ವಿಲಾಯತೀ ನಾಯನ್ನು ಒಳತಂದು ಊಟದ ಪಂಕ್ತಿಯಲ್ಲೇ ಕುಳ್ಳಿರಿಸಿದರು. ಆ ದುಷ್ಟ ನಾಯಿ, ಬಟ್ಟಲು ಎಲೆ ಮಗುಚಿದುದಲ್ಲದೆ, ಬಡಪಾಯಿ ಅಡುಗೆಯಾತನ ಮೇಲೂ ನೆಗೆಯಿತು ಅಲ್ಲೇ, ಮನೆಯೊಡತಿಯ ಅತಿಥಿ ಸತ್ಕಾರದ ಧರ್ಮ ನೆರವೇರಿಸಲೆಂದು ಔಪಚಾರಿಕವಾಗಿ ಕುಳಿತಿದ್ದ, ಅರಸಿ "ಛೀ!" ಎನ್ನಲು. ಅವಳ ಮೇಲೆಯೇ ನೆಗೆದು, ಕತ್ತು ಕಚ್ಚಿ ಉರುಳಿಸಿತು. ಅರಸಿ "ಅಯ್ಯೋ" ಎಂದು ಚೀರಿಕೊಂಡಳು. ಸಾನಿ, ಚಟ್ಟಗಾರ, ಮಿತ್ರರೆಲ್ಲಾ ಹೊಟ್ಟೆ ಹುಣ್ಣಾಗುವಂತೆ ಗಹಗಹಿಸಿದರು. ಮಗ ಒಮ್ಮೊಂದೊಮ್ಮೆ ಕಾತರನಾಗಿ ನಾಯಿಯನ್ನು ಹಿಡಿಯಲು ಹೋಗುವೆನೆನ್ನುವಾಗ ಸಾನಿಯೂ ಚಟ್ಟಿಗಾರನೂ ನಿಲ್ಲಿಸಿ: "ಇರಯ್ಯ; ತಮಾಷೆ ನೋಡೋಣ" ಎಂದರು.

ಒಂದು ಕ್ಷಣ ಬಲಭೀಮ್ಸೈಯ ಅರಸು ದಿಗ್ಭ್ರಾಂತರಾಗಿ, ಸಿಡಿಲು

ಹೊಡೆದವರಂತೆ ನಿಂತಿದ್ದರು. ಮರುಕ್ಷಣ ಆ ಸಣ್ಣ ದೇಹದಲ್ಲಿನ ಅಲ್ಪ ಸ್ವಲ್ಪ ರಕ್ತವೂ ಕುದಿದೆದ್ದಿತು ಮಿಂಚಿನ ವೇಗದಲ್ಲಿ, ಒರೆಯನ್ನೆಳದು, ತಲವಾರು ''ಚಂದ್ರಾಯುಧ'' ವನ್ನು ಹಿರಿದು ನಾಯಿಯೆಡೆ ಧಾವಿಸಿ ಬಲವಾಗಿ ಎರಡೇಟು ಕೊಡಲು ನಾಯಿ ತುಂಡಾಗಿ ಸತ್ತುಬಿದ್ದಿತು. ನಾಯಿಯ ರಕ್ತಮಯವಾದ ಹೆಣದ ಮೇಲೆ, ರಕ್ತ ಸಂಚಿತವಾದ ತಲವಾರನ್ನು ಹಿಡಿದು, ರುದ್ರಭೈರವನ ಭಂಗಿಯಲ್ಲಿ ಅರಸು ನಿಂತಿದ್ದರು. ಈ ವಿಚಿತ್ರ ಸನ್ನಿವೇಶ, ಈ ವಾಮನಮೂರ್ತಿಯ ರೌದ್ರಾವೇಶ, ಕಿಡಿ ಹಾಯಿಸುವ ಕಣ್ಣು, ಕುಣಿಯುವ ಹುಬ್ಬು, ಕಚ್ಚಿದ ತುಟಿಗಳನ್ನು ಕಂಡಂತೂ ಅತಿಥಿಗಳ ನಗೆಗೆ ಮಿತಿ ಉಳಿಯಲಿಲ್ಲ. ಸಾಸಿಗಂತೂ ನಗೆಯುಕ್ಕಿ ಶ್ವಾಸರೋಧವಾಗುವಂತಾಯಿತು. ಚಟ್ಟಿಗಾರ ತನ್ನ ವಿಲಾಯಿತೀ ಹಾಗು (ಹೇಟು) ವನ್ನು ಮೇಲಕ್ಕೆಸೆದು ಹಿಡಿದು ಚೆಂಡಾಡಿ ತನ್ನ ಹರ್ಷವನ್ನು ವ್ಯಕ್ತಪಡಿಸಿದ ಚಿಕ್ಕರಸು ತನ್ನ ಮಿತ್ರರ ವಿನೋದಭಾವ, ಒಳಮನಸ್ಸಿನ ಕಾತರತೆಗಳ ನಡುವೆ ಹೊಯ್ದಾಡುತ್ತಿದ್ದಂತೆಯೇ, ಬಲಭೀಮ್ಮೆಯ ಅರಸು ಅರಸಿಯನ್ನೆತ್ತಿಕೊಂಡು ಒಳಮನೆಗೆ ಕೊಂಡೊಯ್ದರು.

ಅರಸಿಗೆ ಮೂರ್ಛೆ ತಪ್ಪಿತ್ತು. ಊಳಿಗದವಳನ್ನೂ, ಚೇಟಿಯನ್ನೂ, ಕರೆದು ಶುಶ್ರೂಷೆಮಾಡೆಂದು ಆಜ್ಞಾಪಿಸಿದರು. ಅರಸಿ ಕಣ್ಣುತೆರೆಯುವವರೆಗೆ ಪಕ್ಕದಲ್ಲೇ ಕುಳಿತು ಸಂತೈಸಲು ಪ್ರಯತ್ನಪಟ್ಟರು. ಅರಸಿ ಬಾಡಿದ ಕಣ್ಣುಗಳಲ್ಲಿ ಕಾತರತೆಯನ್ನಡಗಿಸಿ, ಕಣ್ಣೀರ ಗಂಗೆಗೆ ಅಣೆಕಟ್ಟು ಬಿಗಿದು, ಸಾಂತ್ವನೆಯ ವ್ಯಥಿತ ನಗೆ ಮೂಡಿಸಿದಳು. ಅರಸು ನೋಡಲಾರದೆ, ಎದೆಯಲ್ಲಿ ದಹಿಸುವ ಬೇಗುದಿಯನ್ನು ಅದುಮಿಕೊಂಡು ತನ್ನ ಕಿರುಮನೆಗೆ ಹೋದರು. ಒಂದರ್ಧಘಳಿಗೆ ವಿಹ್ವಲಚಿತ್ತದಿಂದ ಶತಪಥ ತಿರುಗಿದರು. ಮನಸ್ಸು ಸ್ತಿಮಿತಕ್ಕೆ ಬರಲಿಲ್ಲ. ಕೊನೆಗೆ ಗೀತೆಯನ್ನು ತೆಗೆದು ''ಸ್ಥಿತಪ್ರಜ್ಞಸ್ಯ ಕಾ ಭಾಷಾ'' ಎಂಬ ಫಲುಗುಣನ ಪ್ರಶ್ನೆಗೆ ದೊರೆತುತ್ತರವನ್ನೋದುತ್ತ, ಕಂಪಿತ ಮನಸ್ಸಿನ ತಂತಿಯನ್ನು ಸ್ಥಿರಗೊಳಿಸುತ್ತಿದ್ದರು.

**"ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯ ಕ್ರೋಧಃ ಸ್ಥಿತಧೀರ್ಮುನಿರುಚ್ಯತೇ" ॥**

ಎಂದು ಓದುತ್ತಿರುವಾಗಲೇ, ಕೆಳಗಣಿಂದ ಚಿಕ್ಕರಸು ಮತ್ತು ಸಂಗಾತಿಗಳ

ನಗುವಿನ ಕೇಕೆ ಆರ್ಭಟಿ ಏರಿ ಏರಿ ಗಗನಮುಟ್ಟಿತು. ಕೊನೆಗೊಮ್ಮೆ ಈ ನಗುವಿನ ಕೋಲಾಹಲಪಡೆಯಲ್ಲೊಂದು ಆರ್ತನಾದವೂ, ಈ ಅಟ್ಟಹಾಸ ವನ್ನು ಕ್ಷೀಣವಾಗಿ ಬೇಧಿಸಿಕೊಂಡು ಬಂದಿತು. ದೊರೆ ಸಶಂಕರಾಗಿ ಕೆಳಗಿಳಿದರು. ಅರ್ಧ ಮೆಟ್ಟಲಿಳಿದು, ಪುನಃ ಹಿಂಜರಿದರು; ಕೊನೆಗೆ ಕರ್ತವ್ಯ ವನ್ನು ನೆನೆದು, ಕುಲದೈವತ ಆಂಜನೇಯನನ್ನು ನೆನೆದು ಕೆಳಗಿಳಿದರು. ಕೆಳಗಿಳಿದು ಹಜಾರಕ್ಕೆ ಹೋಗಲಾಗಿ, ಎದೆಯನ್ನು ಸೀಳಿಸುವ ಬೀಭತ್ಸ ನೋಟ ಕಂಡಿತು.

ಅರಮನೆಯಲ್ಲಿ ಕೈಗೆ ಸಿಕ್ಕ ದೀಪಗಳನ್ನೆಲ್ಲಾ ಉರಿಸಿದ್ದರು. ಅರಸು ಮಗನೂ, ಸಾನಿಯೂ ಸಂಗಡಿಗರೂ, ತಾವು ತಂದಿದ್ದ ಸೀಸೆಗಳನ್ನು ತೆರೆದು ನಿರರ್ಗಳವಾಗಿ ಕುಡಿಯುತ್ತಿದ್ದರು. ಕುಡಿದು ಮತ್ತರಾಗಿ ಬಿದ್ದಿರುತ್ತಿದ್ದರೆ ಚಿಂತಿರುತ್ತಿರಲಿಲ್ಲ. ಆದರೆ ಅಷ್ಟೇ ಅಲ್ಲ. ಹಜಾರದ ನಡುವಿನಲ್ಲೇ ಒಂದು ಹಂಡೆಯನ್ನು ಕೌಂಚಿ ಹಾಕಿದ್ದರು ಅದರ ಮೇಲೆ ಬಡ ಅಡುಗೆಯವನ ವಾಮನಮೂರ್ತಿ ತಲೆಕೆಳಗಾಗಿ ನಿಂತಿತ್ತು. ಆ ಬಡಪಾಯಿಯ ಸೊಂಟಕ್ಕೆ ದಾರವೊಂದನ್ನು ಕಟ್ಟಿ ಸಾನಿ ಎಳೆಯುತ್ತ, ಕುಣಿಯುತ್ತ, ಹೊರಳಿ ಹೊರಳಿ ನಗುತ್ತ ಇದ್ದಳು. ಚಟ್ಟಿಗಾರ ಇಬ್ಬರು ಸಣ್ಣ ಓಲೆಕಾರರನ್ನೂ, ಇಬ್ಬರು ಸಣ್ಣ ಹೆಣ್ಣಾಳುಗಳನ್ನೂ, ತಲೆ ತಲೆ ಹೊಯ್ದಾಡಿಸಿ ತಾಂಟಿಸಿ, ಅವರ ಬಾಯಿ ಮೂಗುಗಳೊಳಗೆ ಹೆಂಡವನ್ನು ಸುರಿಯುತ್ತಿದ್ದನು. ಫಕ್ಕನೆ, ಸುಮ್ಮನೇ ಜಡವಾಗಿ ಹೆಬ್ಬಾವಿನಂತೆ ಬಿದ್ದಿದ್ದ ಒಬ್ಬ ಮಿತ್ರ,—ಆ ಮಾರಾಠಿಗ—ಧಿಡಕ್ಕನೆದ್ದ. ಆತನ ಕಣ್ಣಲ್ಲಿ ಹೆಂಡದ ಹೊಳಪಿತ್ತು. ಚಿಕ್ಕರಸನನ್ನು ಕುಲುಗಿ "ಏನಯ್ಯ? ನಿನ್ನ ಅಪ್ಪ ನಾಯಿಯನ್ನೇರಿ ಹೆಗ್ಗಣದ ಬೇಟೆಯಾಡುವ ಮೋಜನ್ನು ನೋಡಬೇಡವೇ?" ಎಂದು ಸೂಚಿಸಿದನು.

ಬಲಭೀಮೈಯ ಅರಸು ದೇಹಾದ್ಯಂತವೂ ನಡುಗಿದರು. ತಲೆ ಕೆಳ ಹಾಕಿ, ಭಾರವಾದೆದೆಯೊಡನೆ, ವಕ್ಷದಲ್ಲಿ ಘೋರವಾದ ಘಾಯ ಪಟ್ಟವ ರಂತೆ, ಅರ್ಧಚೇಷ್ಟಿತರಂತೆ ತೆವಳುತ್ತ ಅರಸಿ ಮಲಗಿದ್ದ ಶಯ್ಯಾಗೃಹಕ್ಕೆ ನಡೆದರು. ಹಣೆಯನ್ನು ಅದುಮಿ ಸಂಯಮಿಸಿಕೊಂಡರು. ಒಳಗೆ ಕುಳಿತಿದ್ದ ದಾಸಿಯನ್ನು "ನಡೆ ನೀನು; ನಾನಿರುತ್ತೇನೆ" ಎಂದು ಹೊರಕಳಿಸಿದರು. ಅರಸಿ ನಿಶ್ಚೇಷ್ಟಿತಳಂತೆ ಮಲಗಿದ್ದಳು. ಅರೆನಿದ್ದೆಯಲ್ಲೂ ಮುಖದಲ್ಲಿ

ಮುಗಳು ನಗೆಯಿದ್ದಿತು. ಎಲ್ಲೋ ಸ್ವಪ್ನಲೋಕದಲ್ಲೊಬ್ಬ ಮುದ್ದುಮಗನ ಕನಸು ಕಾಣುತ್ತಿದ್ದಿರಬೇಕು. ದೊರೆ ನಿದ್ರಿಸಿದ್ದಾಕೆಯನ್ನುದ್ದೇಶಿಸಿ: ''ಮಗನನ್ನು ಕಂಡು ಪ್ರಾಣ ಬಿಡಬೇಕೆಂದು ಛಲ ತೊಟ್ಟೆ ನಿನ್ನ ಹಠ ದಂತೆ ಆಗಲಿ'' ಎಂದರು. ತನ್ನ ಒರೆಯಿಂದ ಕತ್ತಿಯನ್ನು ಹಿರಿದರು. ಆ ಸೊರಗಿದ ಕತ್ತಿನಮೇಲೆ, ಆ ರುಗ್ಣ ಶರೀರದ ಮೇಲೆ, ಮೃದುವಾಗಿ, ಪ್ರೀತಿಯಿಂದೆಂಬಂತೆ, ಆದರೆ ತೀಕ್ಷ್ಣವಾಗಿ, ''ಚಂದ್ರಾಯುಧ'' ತಲವಾರನ್ನೆಳೆದರು. ತುಟಿಯ ಮೇಲೆ ಆ ಕನಸಿನ ಅರೆನಿದ್ದೆಯ ಮುಗುಳುನಗೆ ಆಡುತ್ತಿದ್ದಂತೆಯೆ ಅರಸಿಯ ಕಣ್ಣುಮುಚ್ಚಿತು.

ಅರಸು ತನ್ನ ಕಿರುಮನೆಗೆ ನಡೆದರು ಆಳೊಬ್ಬನನ್ನು ಕರೆದು, ಕುದರೆಯ ಲಾಯದಿಂದ ದೊಡ್ಡ ನೀರಿನ ಮರಿಗೆ ತುಂಬಾ ಬಿಸಿ ನೀರು ತುಂಬಿತರಲು ಆಣತಿಯಿತ್ತರು. ಬೆಚ್ಚನ್ನ ನೀರಿನ ದೊಡ್ಡ ಮರಿಗೆ ಬಂದಿತು. ದೊರೆ ಕತ್ತಿನಿಂದೊಂದು ಚಿನ್ನದ ಹಾರವನ್ನು ತೆಗೆದು ಆಳಿಗೆ ಕೊಟ್ಟು, ದಿಗ್ಭ್ರಾಂತನಾದ ಆತನನ್ನು ''ನಡೆ'' ಎಂದು ಕಳಿಸಿ, ಬಾಗಿಲು ಅಗಣಿ ಹಾಕಿ ಭದ್ರಪಡಿಸಿದರು.

ಆಮೇಲೆ ಆ ಅಗಲವಾದ ಬಿಸಿನೀರಿನ ಮರಿಗೆಯೊಳಗೆ ಕುಳಿತರು. ಆ ಮರಿಗೆ ವಿಶಾಲವಾಗಿತ್ತು, ದೊರೆಯ ಕಾಯ ಅನುಕೂಲವಾಗಿ ಚಿಕ್ಕದಾಗಿತ್ತು.

ಸೊಂಟದಿಂದ ಅರಸಿಗೆ ವಿಮೋಚನೆಯಿತ್ತ ಚಂದ್ರಾಯುಧವನ್ನು ತೆಗೆದರು. ತನ್ನ ಎಡ ತೋಳನ್ನು ಬಿಗಿಯಾಗಿ ಒತ್ತಿ ಹಿಡಿದು, ಶುದ್ಧ ರಕ್ತನಾಳವೊಂದನ್ನು ಕಂಡು ಹುಡುಕಿ, ತೀಕ್ಷ್ಣವಾಗಿ ಪ್ರಹರಿಸಿದರು. ಬಳಿಯಲ್ಲೋ, ರನ್ನನ ಗದಾಯುದ್ಧದ ಹೊತ್ತಿಗೆಯನ್ನು ಮೊದಲೇ ಇರಿಸಿಕೊಂಡಿದ್ದರು.

ಗಾಯಹೊಂದಿದ ತೋಳನ್ನು ಬಿಸಿನೀರಿನಲ್ಲಿ ಮುಳುಗಿ ಸಿಟ್ಟಾಯಿತು. ಬಿಸಿ ನೀರೊಳಗೇ ಕುಳಿತು, ಸುಖವಾಗಿ ಒರಗಿ, ಬಲಗೈಯಲ್ಲಿ ''ಗದಾಯುದ್ಧ'' ವನ್ನು ಹಿಡಿದು, ಸುಯೋಧನನು ನೀರಲ್ಲಿ ಮುಳುಗಿ ಜಲಸ್ಥಂಭ ಮಂತ್ರವನ್ನು ಜಪಿಸುವ ಭಾಗವನ್ನೋದುತ್ತಿದ್ದಂತೆ, ಸುಖವಾಗಿ, ಶಾಂತ

ವಾಗಿ, ಜೊಂಪಡರಿತು; ಕಣ್ಣಿಗೆ ನಿದ್ದೆ ಹತ್ತಿತು. ಕೆಲಕ್ಷಣಗಳಲ್ಲಿ, ಆಕಾಶದಲ್ಲಿ ಮಿಂಚಿನಗೆರೆ ಸುಳಿದಂತೆ, ಆ ಮರಿಗೆಯ ನೀರಿನಲ್ಲಿ ಕೆಂಪಿನೊಂದು ರೇಖೆ ಕಾಣಿಸಿಕೊಂಡಿತು. ಇನ್ನು ಕೆಲಕ್ಷಣಗಳಲ್ಲಿ ಕೆಂಪಿನ ರೇಖೆ ದಟ್ಟನಾಗಿ ಬೆಳೆದು, ಆಕಾಶವನ್ನು ಆಚ್ಛಾದಿಸಿದ ಮೋಡದಂತೆ, ನೀರನ್ನೆಲ್ಲಾ ವ್ಯಾಸಿಸಿತು. ನೀರೆಲ್ಲಾ ಕಡುಗೆಂಪು ಆಗಲಿಲ್ಲ ಅನ್ನಿ. ಹಾಗೆ, ಆ ಸಣ್ಣ ದೇಹದಲ್ಲಿ ವಿಶೇಷವಾಗಿ ನೆತ್ತರೂ ಇರಲಿಲ್ಲ.

---

**ವಿ. ಸೂ.**— (ವಿಶ್ವವಿಖ್ಯಾತ ಸಾಹಿತಿ, ದಾರ್ಶನಿಕ ಮತ್ತು ಮೇಧಾವಿ ಆಲ್ಡಸ್ ಹಕ್ಸಲೀಯ "ಸರ್ ಹರ್ ಕ್ಯುಲಿಸ್" ಕಥೆ ಓದಿ.)

# "ಶ್ರೀನಿವಾಸ"ರ ಪುಸ್ತಕಗಳು

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧,೨,೩,೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ನಾಟಕ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ತಾವರೆ (ಪದ್ಯಗಳು)
ಮಂಜುಳಾ (ನಾಟಕ)
ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)

ಶಿವ ಛತ್ರಪತಿ (ನಾಟಕ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪,೫,೬,೭,೮,೯
ಜನಪದ ಸಾಹಿತ್ಯ (ಉಪನ್ಯಾಸ)
ತಿರುಪಾಣಿ (ನಾಟಕ)
ಕಾಕನಕೋಟೆ ( ,, )
ಶ್ರೀ ರಾಮಕೃಷ್ಣ (ಚರಿತ್ರ)
ರವೀಂದ್ರನಾಥ ಠಾಕೂರರು*
ಆದಿಕವಿ ವಾಲ್ಮೀಕಿ
ಗೌಡರಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )
ತಾಯ್ನುಡಿಯ ತಮ್ಮುಡಿ (ಭಾಷಣ)
ನವರಾತ್ರಿ ೨,೩,೪,೫ (ಕವನ ಕಥನ)
ಚಿತ್ರಾಂಗದಾ (ಭಾಷಾಂತರ)
ಸುನೀತಿ (ಪದ್ಯಗಳು)

ಪ್ರಸಂಗ (ಲೇಖನಗಳು)

## ಇಂಗ್ಲಿಷ್ ಪುಸ್ತಕಗಳು

Popular Culture in Karnataka *(cloth bound)*
The Poetry of Valmiki *(cloth bound)*
Short Stories *(4 Volumes)*
Subbanna *(A Story)*
Rabindranath Tagore *(cloth bound)*

" ಅಶ್ವತ್ಥ "
ಸಣ್ಣ ಕತೆಗಳು

**ಜೀವನ ಕಾರ್ಯಾಲಯ ಬಸವನಗುಡಿ ಬೆಂಗಳೂರು ೪**

* ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ

